## ಈ ಲೇಖಕರ ಇತರ ಕೃತಿಗಳು

೧. ಹಗಲುಗನಸುಗಳು

೨. ಆಷಾಢಭೂತಿ (ನಾಟಕ)

೩. ಹವಳದ ದ್ವೀಪ

೪. ಸೋಕ್ರಟೀಸನ ಕೊನೆಯ ದಿನಗಳು

ವಿಶ್ವಸಾಹಿತ್ಯಮಾಲೆ—೧

# ಯೋಧನ ಪುನರಾಗಮನ

(ಐದು ಕಥೆಗಳ ಅನುವಾದ)

ಎ. ಎನ್. ಮೂರ್ತಿರಾವ್

1947

ಪ್ರಕಾಶಕರು
ವಿಶ್ವಸಾಹಿತ್ಯ
ಮೈಸೂರು

# ಅರಿಕೆ

ಈ ಪುಸ್ತಕದಲ್ಲಿ ಪ್ರಕಟಿಸಿರುವ ಐದು ಕಥೆಗಳೂ ಅನುವಾದಿತವಾದವು. ಮೂಲ ಕಥೆಗಾರರ ಹೆಸರುಗಳನ್ನು ಕೆಳಗೆ ಕೊಟ್ಟಿದೆ :

**ಯೋಧನ ಪುನರಾಗಮನ**—ಕಾನ್ಸ್ಟೆಂಟೈನ್ ಟ್ರೆನಿಯೊವ್ (ರಷ್ಯದೇಶದವರು) "International Literature" ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟಿಸಿದ್ದ "The Return" ಎಂಬ ಕಥೆ.

**ಬ್ಲಾಂಡಿಂಗ್ಸ್ ಕಟ್ಟಿದ ಬಂಗಲೆ**—ಬರೆದವರು: ಎರಿಕ್ ಹಾಡ್ಗಿನ್ಸ್. "Readers' Digest" ಮಾಸ ಪತ್ರಿಕೆಯಲ್ಲಿ ಸಂಗ್ರಹಿಸಿದ್ದ "Blandings Builds His Castle" ಎಂಬ ಕಥೆ.

**ಸ್ಫಟಿಕಗಿರಿಯ ರತ್ನ**—ನಥಾನಿಯಲ್ ಹಾಥಾರ್ನ್ (ಅಮೆರಿಕಾದವರು) ಬರೆದ "The Great Carbuncle" ಎಂಬಕಥೆ.

**ಎಲಿಯನೋರ**—ಎಡ್ಗಾರ್ ಅಲನ್ ಪೋ (ಅಮೆರಿಕದವರು) ಬರೆದ ಕಥೆ.

**ರಿಪ್ ವಾನ್ ವಿಂಕಲ್**—ವಾಷಿಂಗ್ಟನ್ ಅರ್ವಿಂಗ್ (ಅಮೆರಿಕಾದವರು) ಬರೆದ ಕಥೆ.

ಇವುಗಳಲ್ಲಿ ಮೊದಲನೆಯ ಎರಡು ಕಥೆಗಳು 'ಪುಸ್ತಕ ಪ್ರಪಂಚ' ದಲ್ಲಿಯೂ "ಎಲಿಯನೋರ" ಎಂಬ ಕಥೆ 'ಪ್ರಬುದ್ಧ ಕರ್ಣಾಟಕ' ದಲ್ಲಿಯೂ ಈಗಾಗಲೇ ಪ್ರಕಟವಾಗಿದ್ದವು.

**ಎ. ಎನ್. ಮೂರ್ತಿರಾವ್**

# ವಿವರ

# ಯೋಧನ ಪುನರಾಗಮನ

## ೧

ವಸಂತ ಕಾಲದ ಹೊಲಗಳು ಮಂಜಿನ ಹೊದಿಕೆಯನ್ನು ಕಳೆದು ಎಲ್ಲ ಕಡೆಯಲ್ಲಿಯೂ ತುದಿ ಮೊದಲಿಲ್ಲದಂತೆ ಹರಡಿದ್ದುವು. ಕಣಿವೆಯ ಆಚೆ ಇದ್ದ ಪೊದೆಗಳಲ್ಲಿ ಇನ್ನೂ ಅಲ್ಪಸ್ವಲ್ಪ ಮಂಜು ನೀಲಿಯ ಬಣ್ಣ ತಳೆದು ಎಲೆಗಳ ನಡುವೆ ಹೊಳೆಯುತ್ತಿತ್ತು. ಅಂತರಿಕ್ಷದಲ್ಲಿ ಬಾನಾಡಿಯೊಂದು ಹಾಡುತ್ತಿತ್ತು.

ಟ್ಯಾಂಕ್ ಸಾರ್ಜೆಂಟ್ ಅಲೆಕ್ಸಿ ಸ್ಕ್ವಾರ್ಟ್ಸಾವ್ ನಡೆದು ಹೋಗುತ್ತಿದ್ದ ರಸ್ತೆ ಆಗಲೇ ಚೆನ್ನಾಗಿ ಒಣಗಿತ್ತು. ಪಕ್ಕದ ಚರಂಡಿಗಳಲ್ಲಿ ಹಳೆಯ ವರ್ಷದ ಒಣ ಹುಲ್ಲಿನ ನಡುವೆ ಹಸುರು ಬೆಳೆದು ಇಣಿಕಿ ನೋಡುತ್ತಿತ್ತು. ದಾರಿಯಲ್ಲಿ ಅಲ್ಲಲ್ಲಿಯೇ ಯುದ್ಧಕಾಲದ ಕಂದಕಗಳು, ನಾಶವಾದ ಮೋಟಾರ್ ಗಾಡಿಗಳ ಅಸ್ಥಿಪಂಜರಗಳು. ಸ್ವಲ್ಪ ಮುಂದೆ ತಾನು ಹುಟ್ಟಿ ಬೆಳೆದ ಹಳ್ಳಿ.

ಅಲೆಕ್ಸಿಗೆ ಒಂದು ಕ್ಷಣ ಉಸಿರು ಹಿಡಿದಂತಾಯಿತು. ತನಗೆ ಉಳಿದಿದ್ದ ಒಂಟಿಗಣ್ಣಿನಿಂದ ಹಳ್ಳಿಯನ್ನು ನೋಡುತ್ತ ಬಹಳ ಹೊತ್ತು ನಿಂತನು. ಯುದ್ಧದ ವಿಪತ್ತಿಗೆ ಸಿಕ್ಕಿ ಹಳ್ಳಿ ನಾಶವಾಗಿರಬೇಕೆಂದು ಅವನು ಬಲ್ಲ. ತಾನು ಬಂದ ದಾರಿಯಲ್ಲಿ ಅಂಥ ಹಳ್ಳಿಗಳೂ ಪಟ್ಟಣಗಳೂ ಎಷ್ಟೋ ಕಣ್ಣಿಗೆ ಬೀಳಲಿಲ್ಲವೆ! ಅವುಗಳಂತೆಯೇ ತನ್ನ ಹಳ್ಳಿ—

---

*International Literature* ಎಂಬ ಮಾಸ ಪತ್ರಿಕೆಯಲ್ಲಿ ಪ್ರಕಟವಾದ ಕಥೆ. ಲೇಖಕರು (ರಷ್ಯ ದೇಶದವರು)—ಕಾನ್ಸ್ಟಂಟೈನ್ ಟ್ರೆನಿಯಾವ್.

ಕುಸಿದು ಬೀಳುತ್ತಿರುವ ಮನೆಗಳು, ಸುಟ್ಟು ಕಪ್ಪಾಗಿ ಕಾಣುವ ಚಿಮಣಿಗಳು, ಅವುಗಳ ಮಗ್ಗುಲಲ್ಲಿಯೇ ಹೊಸದಾಗಿ ಕಟ್ಟಿದ ಮನೆ, ಬೆಳಗಿನ ಬಿಸಿಲಿನಲ್ಲಿ ಚಿನ್ನದಂತೆ ಹೊಳೆಯುವ ಹೊಸ ಹುಲ್ಲಿನ ಚಾವಣಿ. ಅವ ಕಣ್ಣು ತನ್ನ ಮನೆಯನ್ನು ಹುಡುಕಿ ಅಲೆದಾಡಿತು. . . . . ಹೃದಯದ ತುಡಿತ ಬಲವಾಯಿತು—ಅಲ್ಲಿ ಹಳ್ಳಿಯ ಚೌಕದ ಹತ್ತಿರ, ಆ ವಿಲ್ಲೋ ಗಿಡದ ಬಳಿ ಕಾಣುವ ಹಳದಿ ಹುಲ್ಲಿನ ಚಾವಣಿ, ಬೆಳ್ಳಗೆ ಮೇಲಕ್ಕೆದ್ದ ಚಿಮಣಿ! ತನ್ನ ವಿಕಾರವಾದ ಮುಖದಿಂದ ಕಣ್ಣೀರನ್ನೊರಸಿಕೊಂಡನು. ಶತ್ರುಗಳು ತನ್ನ ಹಳ್ಳಿಯನ್ನು ನಾಶಮಾಡಿದ್ದರು—ತನ್ನ ಮುಖವನ್ನು ನಾಶಮಾಡಿದಂತೆಯೇ. ಹಳ್ಳಿಯೇನೋ ಮತ್ತೆ ಏಳುತ್ತದೆ, ಬಹು ಕಾಲ ಪಾಳಾಗಿರುವುದಿಲ್ಲ. ಈಗ ಕಾಣುವ ಸುಟ್ಟ ಮರಮುಟ್ಟುಗಳಿಗೂ ಅರ್ಧ ಕುಸಿದಿರುವ ಮನೆಗಳಿಗೂ ಹೊಸ ಜೀವ ಬಂದು ಯುದ್ಧದ ನೆನಪು ಅಳಿದು ಹೋಗುತ್ತದೆ. ಆದರೆ ತನ್ನ ಮುಖ ಮಾತ್ರ ಎಂದೆಂದಿಗೂ ಬದಲಾಯಿಸುವಂತಿಲ್ಲ.

ಆಸ್ಪತ್ರೆಯಿಂದ ಬಿಡುಗಡೆಯಾದ ಕೂಡಲೆ ಅಲೆಕ್ಸಿ ನೆಟ್ಟಗೆ ತನ್ನ ಹಳ್ಳಿಯ ಕಡೆ ಹೊರಟಿದ್ದನು. ಆಸ್ಪತ್ರೆಗೆ ಯಾವಾಗ ಹೋದನೋ ಯಾರು ಅಲ್ಲಿಗೆ ತಂದು ಹಾಕಿದರೋ ಅವನಿಗೆ ತಿಳಿಯದು. ಅವನಿಗೆ ನೆನಪಿದ್ದದ್ದು ಇಷ್ಟೆ—ನದಿಯ ಆಚೆ ಜರ್ಮನ್ ಪಾನ್ಸರ್‌ಗಳು ಜೇನು ಹುಳುಗಳಂತೆ ನೆರೆದು ನಿಂತಿದ್ದರು. ಅವರ ಇದಿರಿನಲ್ಲಿಯೇ ನದಿಯನ್ನು ದಾಟಿ ಟ್ಯಾಂಕನ್ನು ಅವರ ವ್ಯೂಹದೊಳಕ್ಕೆ ನುಗ್ಗಿಸಿದವರಲ್ಲಿ ತಾನೇ ಮೊದಲಿಗ. ಇದ್ದಕ್ಕಿದ್ದ ಹಾಗೆಯೇ ಟ್ಯಾಂಕಿನಲ್ಲಿ ಕಣ್ಣು ಕೋರೈಸುವಂಥ ಉರಿಯೆದ್ದಿತು–ಮತ್ತೇನೂ ತಿಳಿಯದು. ಅಲ್ಲಿಂದಾಚೆಗೆ ಯುದ್ಧ ಹೇಗೆ ನಡೆಯಿತೋ, ಅದೆಲ್ಲಾ ತಿಳಿದದ್ದು ತನಗೆ ಶಸ್ತ್ರಚಿಕಿತ್ಸೆಯಾಗಿ ಚೇತರಿಸಿಕೊಂಡಮೇಲೆ. ಅವನ ಮುಖವೆಲ್ಲಾ ಸುಟ್ಟುಹೋಗಿ ಮಾಂಸ ಖಂಡಗಳು ಎದ್ದು ಕಾಣುತ್ತಿದ್ದುವು. ಇತರರ ಶರೀರದಿಂದಲೂ ತನ್ನ ಶರೀರದ ಇತರ ಭಾಗಗಳಿಂದಲೂ ಚರ್ಮವನ್ನು ತೆಗೆದು ಮುಖಕ್ಕೆ ಹಚ್ಚಿಗರು; ಲೋಹದ ಗಂಟಲೊಂದನ್ನು ಮಾಡಿ ಹಾಕಿದರು; ನಾಶವಾದ ಒಂದು ಕಣ್ಣಿಗೆ ಬದಲಾಗಿ ಗಾಜಿನ ಕಣ್ಣನ್ನು ಕಟ್ಟಿದರು. ಸ್ವಲ್ಪ ಸುಧಾ

ರಿಸಿದ ಮೇಲೆ ಆಸ್ಪತ್ರೆಯಲ್ಲೇ ಅವನಿಗೆ ಲೆನಿನ್ ವರ್ಗದ ಪ್ರಶಸ್ತಿಯನ್ನೂ (Order of Lenin) ಚಿನ್ನದ ನಕ್ಷತ್ರವನ್ನೂ ತಂದುಕೊಟ್ಟು ಗೌರವಿಸಿದರು. ಆದರೇನು, ತನ್ನ ಮುಖ ತಾನೇ ಗುರುತಿಸಲಾಗದಂತಿತ್ತು. ಕನ್ನಡಿ ಹಿಡಿದು ಪರೀಕ್ಷಿಸಿದರೆ ಮುಖದ ಯಾವುದೊಂದು ಭಾಗವೂ ಮೊದಲಿನಂತಿರಲಿಲ್ಲ. ಅವನ ಕಂಠದ ಧ್ವನಿ ಸಹಿತ ವ್ಯತ್ಯಾಸವಾಗಿ ಹೋಗಿತ್ತು.

ಹಳ್ಳಿಯ ಹತ್ತಿರ ಹರಿಯುವ ಸಣ್ಣ ತೊರೆಯ ಬಳಿಗೆ ಬಂದು ಸೇತುವೆಯ ಮೇಲೆ ಕಾಲಿಟ್ಟನು. ಎರಡು ದಡಗಳಲ್ಲಿಯೂ ಹೊಸ ಗರಿಕೆಯ ಹುಲ್ಲು ಆಗಲೇ ಕಾಣುತ್ತಿತ್ತು. ಪೊದೆಗಳಲ್ಲಿ ಹಕ್ಕಿಗಳು ಸಿಳ್ಳುಹಾಕಿ ಚಿಲಿಪಿಲಿಗುಟ್ಟುತ್ತಿದ್ದವು. ಸ್ವಲ್ಪ ಮುಂದೆ ಕೆಲವು ಹೆಂಗಸರು ಜರ್ಮನ್ ಸಿಪಾಯಿಗಳ ಟೋಪಿಗಳಲ್ಲಿ ಸುಣ್ಣ ಬಣ್ಣ ತುಂಬಿಕೊಂಡು ಕಲೆಕ್ಟಿವ್ ಫಾರಂ ಗುಡಿಸಲಿನ ಗೋಡೆಗಳನ್ನು ನಯಮಾಡುತ್ತಿದ್ದರು. ಅಲೆಕ್ಸಿ ಅವರನ್ನು ದಿಟ್ಟಿಸಿ ನೋಡಿದನು. ಅವರು ಯಾರೂ ತನ್ನ ಜೊತೆಯವರಲ್ಲ. ತೀರ ವಯಸ್ಸಾದವರು, ಇಲ್ಲವೆ ಎಳೆಯ ವಯಸ್ಸಿನವರು. ಆ ಗುಡಿಸಲಿನಿಂದ ಮುಂದೆ ರಸ್ತೆ ತಿರುಗುವ ಮೂಲೆಯಲ್ಲಿ ಗಡ್ಡದ ಮುದುಕನೊಬ್ಬ ರೈತರೊಡನೆ ಬಹಳ ಉತ್ಸಾಹದಿಂದ ಏನೋ ಮಾತಾಡುತ್ತಿದ್ದನು. ಆತನ ಗುರುತಾಯಿತು—ಕ್ರಯಾಷ್ಕ್.

“ ಅದು ಹೇಗಾಯಿತು ಅಂತೀರಿ? ಅವರು ಆ ಹಸುವನ್ನು ನಮಗೆ ಮಾರಿದಾಗ, ಸೆಂಟ್ ಅಲೆಕ್ಸಿ ದಿನದ ಹೊತ್ತಿಗೆ ಕರು ಹಾಕುತ್ತೆ ಅಂತ ಹೇಳಿದ್ದರು. ನಾನೇನೋ ಅವನ್ನು ನಂಬಿರಲಿಲ್ಲ. ಆದರೂ ನೋಡಿ, ಹಸು ಇವೊತ್ತು ಕರುಹಾಕಿದೆ—ಇವೊತ್ತೇ ಸೆಂಟ್ ಅಲೆಕ್ಸಿ ದಿನ! ಈಗಲಾದರೂ ನಂಬುತ್ತೀರೋ ಇಲ್ಲವೊ ? ”

ಅಲೆಕ್ಸಿ ಹತ್ತಿರ ಬಂದಾಗ ಅವರೆಲ್ಲರೂ ಅವನ ಕಡೆ ತಿರುಗಿದರು. ಅವರ ದೃಷ್ಟಿಯಲ್ಲಿ ಸ್ವಲ್ಪ ಅಸಹ್ಯಮಿಶ್ರವಾದ ಕನಿಕರ. ಅಲೆಕ್ಸಿ ಮೌನವಾಗಿ ಅವರನ್ನು ವಂದಿಸಿ ಮುಂದೆ ನಡೆದನು. ಇನ್ನೊಂದು ಗುಂಪಿನವರ ಮಾತಿನಲ್ಲಿ ನಾಸ್ಟ್ಯಳ ಹೆಸರು ಕಿವಿಗೆ ಬಿತ್ತು. ಅಲೆಕ್ಸಿಗೆ ಗಂಟಲು ಬಿಗಿದುಕೊಂಡು ಬಂದು ಕಾಲು ಅಲ್ಲಿಯೇ ನಿಂತಿತು. ಅವರ ಮಾತಿ

ನಿಂದ ನಾಸ್ಟ್ಯ ಆ ಹಳ್ಳಿಯ ಸಾಮೂಹಿಕ ಬೇಸಾಯದ ಅಧ್ಯಕ್ಷೆಯೆಂದು ತಿಳಿಯಿತು ...ಸ್ವಲ್ಪ ಮುಂದೆ, ರಸ್ತೆಯು ತೊರೆಯ ಕಡೆಗೆ ತಿರುಗುವ ಬಳಿಯಲ್ಲಿ ತನ್ನ ಮನೆಯಿದೆ. ಅಲೆಕ್ಸಿಗೆ ಉಸಿರಾಡುವುದೇ ಕಷ್ಟವಾಯಿತು. ಎರಡು ಹೆಜ್ಜೆ ಮುಂದೆ ಬಂದ ಮೇಲೆ, ಆ ಹಳೆಯ ಕೊಂಬೆ ಮುರಿದ ವಿಲ್ಲೋ ಮರದ ಕೆಳಗೆ ಮನೆ ಕಾಣಿಸಿತು. ಶುಭ್ರವಾಗಿ ಸುಣ್ಣ ತೊಡೆದು ಹೊಸ ಚಾವಣಿ ಹೊದಿಸಿದ್ದು....ನಿದ್ರೆಯಲ್ಲಿ, ಎಚ್ಚರದಲ್ಲಿ, ಕಾಳಗದ ನಡುವೆ, ವಿಶ್ರಾಂತಿ ಸಮಯದಲ್ಲಿ—ಎಷ್ಟುಸಲ ಆ ಮನೆಯ ಚಿತ್ರ ಅವನ ಕಣ್ಣುಮುಂದೆ ನಿಲ್ಲುವುದು! ಅದೇ ಹಳೆಯ ಹೆಬ್ಬಾಗಿಲನ್ನು ತೆಗೆದು ಅಂಗಳದೊಳಗೆ ಬಂದರೆ ನೇಗಿಲು, ಗಾಡಿ ಮೊದಲಾದುವೆಲ್ಲ ಎಂದಿನಂತೆ ತಮ್ಮ ತಮ್ಮ ಸ್ಥಾನದಲ್ಲಿದ್ದುವು. ಅವನನ್ನು ಸ್ವಾಗತಿಸುವುದಕ್ಕೆ ವೃದ್ಧೆಯೊಬ್ಬಳು ಮುಂದೆ ಬಂದಳು. ಆಕೆಯ ಕಣ್ಣುಗಳಿಂದಲೇ ತಾಯಿಯೆಂದು ಗುರುತಿಸಿದನು. ಮುಖದಲ್ಲಿ ವಯಸ್ಸು ಹೆಚ್ಚಾಗಿ ಕಾಣುತ್ತದೆ; ಮೊದಲಿಗಿಂತಲೂ ಕೃಶವಾಗಿದ್ದಾಳೆ; ಹೊದ್ದಿರುವ ಶಾಲಿನಿಂದ ಹೊರಬಿದ್ದಿರುವ ಕೂದಲೆಲ್ಲ ನರೆತಿದೆ. ಆದರೆ ಆ ಕಣ್ಣುಗಳು—ಅಗಲುವ ಸಮಯದಲ್ಲಿ ಹೇಳಲಾರದ ದುಃಖದಿಂದ ತನ್ನನ್ನೇ ಹಿಂಬಾಲಿಸಿ ಬರುವಂತಿದ್ದ ಆ ಕಣ್ಣುಗಳನ್ನು ಅಲೆಕ್ಸಿ ಒಂದು ನಿಮಿಷವೂ ಮರೆತಿರಲಿಲ್ಲ. ಈಗ ಆಕೆಯ ದೃಷ್ಟಿಯಲ್ಲಿ ದುಃಖ ಬೆರೆದ ಆಶ್ಚರ್ಯ.

"ನಮಸ್ಕಾರ" ತನ್ನ ಗಡುಸು ಧ್ವನಿಯಲ್ಲಿ ಅಲೆಕ್ಸಿಯೇ ಮೊದಲು ಮಾತಾಡಿದ.

"ನಮಸ್ಕಾರ. ನಾಸ್ಟ್ಯಳನ್ನು ನೋಡುವುದಕ್ಕೆ ಬಂದಿರಾ?"

"ಹೌದು, ನಾಸ್ಟ್ಯಳನ್ನು ಮತ್ತು ನಿಮ್ಮನ್ನು. ನಾನು....ನಿಮ್ಮ ಅಲೆಕ್ಸಿಯಿಂದ ವರ್ತಮಾನ ತಂದಿದ್ದೇನೆ."

ತಾಯಿಯ ಕಣ್ಣಿನಲ್ಲಿ ಸಂತೋಷ ಮಿಂಚಿತು; ಮರುಕ್ಷಣದಲ್ಲಿಯೇ ಕಣ್ಣೀರೂ ಮಿನುಗಿತು.

"ನನ್ನ ಮಗುವಿನಿಂದಲೇ? ಎಲ್ಲಿದ್ದಾನೆ ಈಗ? ನೀವು ಅವನನ್ನು ಎಲ್ಲಿ ನೋಡಿದಿರಿ? ಆಸ್ಪತ್ರೆಯಲ್ಲೆ? ಎಲ್ಲಿ?"

"ಹೌದು, ಆಸ್ಪತ್ರೆಯಲ್ಲಿ ನೋಡಿದೆ, ಅಲ್ಲದೆ....ನಾವು ಯುದ್ಧ

ದಲ್ಲಿ ಜೊತೆಯಾಗಿಯೇ ಇದ್ದೆವು. ಅಕ್ಕಪಕ್ಕದಲ್ಲಿಯೇ ಹೋರಾಡಿದೆವು... ಆತನ ಸಂಸಾರವೆಲ್ಲ ಕ್ಷೇಮವೆ?"

"ಎಲ್ಲರೂ ಚೆನ್ನಾಗಿದ್ದಾರಪ್ಪ, ದೇವರ ದಯೆ." ಮುದುಕಿ ಇದ್ದಕ್ಕಿದ್ದ ಹಾಗೆಯೇ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

"ತಡೆದುಕೊಳ್ಳಿ, ತಾಯಿ, ಮನಸ್ಸಿಗೆ ಸಮಾಧಾನ ತಂದುಕೊಳ್ಳಿ. ನಿಮ್ಮ ಮಗ ಅಷ್ಟೇನೂ ದುಃಸ್ಥಿತಿಯಲ್ಲಿಲ್ಲ ...ಸ್ವಲ್ಪ ಗಾಯವಾಗಿದೆ. ಬೇಗ ಆಸ್ಪತ್ರೆಯಿಂದ ಬಿಟ್ಟುಬಿಡುತ್ತಾರೆ. ಆತನ ಹೆಂಡತಿ ಮನೆಯಲ್ಲಿಲ್ಲವೆ? .. ಮಕ್ಕಳು ?"

"ನಾಸ್ತ್ಯ ದಿನವೆಲ್ಲಾ ಕಲೆಕ್ಟಿವ್ ಫಾರಂನಲ್ಲಿಯೇ ಇರುತ್ತಾಳೆ. ಅಲ್ಲಿ ಕಟ್ಟಡದ ಕೆಲಸ ನಡೆಯುತ್ತಿದೆ. ಇನ್ನು ಎರಡು ಮೂರು ದಿನಗಳಲ್ಲೇ ಬಿತ್ತನೆಯ ಕೆಲಸವೂ ಪ್ರಾರಂಭವಾಗಬೇಕು. ಸ್ತ್ಯೋಪ—ನನ್ನ ಮೊಮ್ಮಗ—ಯಾವಾಗಲೂ ಅವಳ ಜೊತೆ ಇರುತ್ತಾನೆ. ನಟಾಷ ಮಾತ್ರ ಮನೆಯಲ್ಲೇ ಇದ್ದಾಳೆ....ನಿಂತೇ ಇದ್ದೀರಲ್ಲ, ಒಳಗೆ ಬನ್ನಿ, ಸ್ವಲ್ಪ ವಿಶ್ರಮಿಸಿಕೊಳ್ಳುವಿರಂತೆ."

ಆಕೆ ಬಾಗಿಲನ್ನು ತೆರೆದಳು. ಎಳೆತನದಿಂದಲೂ ಪರಿಚಿತವಾದ ಹೊಸಲು ದಾಟಿ, ಯುದ್ಧಕಾಲದಲ್ಲಿ ಸಹ ತಾನು ನೆನೆಯುತ್ತಿದ್ದ ಆ ಮನೆಯ ಗಂಧವನ್ನು ಆತುರದಿಂದ ಹೀರಿಕೊಂಡನು. ಕಿಟಕಿಯ ಬಳಿಯಲ್ಲಿ ಕೆಂಪು ಬಟ್ಟೆಯ ಚೂರುಗಳನ್ನಿಟ್ಟುಕೊಂಡು ಚಿಕ್ಕ ಹುಡುಗಿಯೊಂದು ಆಡುತ್ತಾ ಕುಳಿತಿತ್ತು. ನಟಾಷ ಗುರುತು ಸಿಕ್ಕುವುದೇ ಕಷ್ಟವಾಗುವಷ್ಟು ಬೆಳೆದುಬಿಟ್ಟಿದ್ದಳು. ಮೊದಲಿಗಿಂತಲೂ ಎತ್ತರವಾಗಿದ್ದಳು; ದೇಹ ಸ್ವಲ್ಪ ಕೃಶ. ಆದರೂ ಅವಳ ಕಣ್ಣುಗಳಿಂದ—ನಾಸ್ತ್ಯಳ ಕಣ್ಣುಗಳೇ— ಸುಲಭವಾಗಿ ಗುರುತಿಸಿ, ತನ್ನ ಸದ್ಯ ಸ್ಥಿತಿಯನ್ನು ಸಂಪೂರ್ಣವಾಗಿ ಮರೆತು ಥಟ್ಟನೆ ಮಗುವಿನ ಕಡೆಗೆ ಹೆಜ್ಜೆಯಿಟ್ಟನು. ಮಗು ಭಯದಿಂದ ಮೂಲೆಯಲ್ಲಿ ಹುದುಗಿಕೊಂಡು ಅರಳಿದ ಕಣ್ಣುಗಳಿಂದ ಅವನನ್ನು ದಿಟ್ಟಿಸಿತು.

"ಹೆದರಿಕೆ ಯಾಕೆ ಮಗು? ಈ ಮಾವ ಒಳ್ಳೆಯವರು. ಅಣ್ಣ ಅವರನ್ನು ಇಲ್ಲಿಗೆ ಕಳಿಸಿದಾನೆ."

"ನಿನಗೆ ಏನೇನೋ ತಮಾಷೆ ಸಾಮಾನು ತಂದಿದೇನಮ್ಮ, ಇಲ್ಲಿ ನೋಡು.'' ಅಲೆಕ್ಸಿ ಹೆಗಲಮೇಲಿನ ಚೀಲವನ್ನು ತೆಗೆದು, ಮಕ್ಕಳಿಗಾಗಿಯೇ ಆಸ್ಪತ್ರೆಯವರು ಕೊಟ್ಟಿದ್ದ ಕೆಲವು ಪದಾರ್ಥಗಳನ್ನು ನೀಡಿದನು. ಆದರೆ ಮಗು ಮುಂದೆ ಬರಲಿಲ್ಲ.

"ತಗೊ ಚಿನ್ನ, ನಿಮ್ಮಣ್ಣ ಕಳಿಸಿದ್ದು ಇದೆಲ್ಲಾ.''

ನಟಾಷ ಅಲುಗಾಡದೆ ಹಾಗೆಯೇ ನಿಂತಿದ್ದಳು.

"ತಗೋ ಮಗು, ಅಣ್ಣನಿಗೆ ನಿನ್ನ ಕಂಡರೆ ಎಷ್ಟು ಪ್ರೀತಿ, ನೋಡಿದೆಯಾ? ದಿನಾ ಅಣ್ಣನ ಮಾತೇ ಆಡುತ್ತಿದ್ದವಳು ಈಗ ಹೆದರಿಕೊಂಡು ನಿಂತುಬಿಟ್ಟಿಯಲ್ಲ!" ಎಂದಳು ಅಜ್ಜಿ. ಅನಂತರ ಅಲೆಕ್ಸಿಯ ಕಡೆ ತಿರುಗಿ "ನೋಡಿ, ರೇಡಿಯೋದಲ್ಲಿ ಅವರ ಅಣ್ಣನ ಮಾತು ಬಂದಾಗಲೆಲ್ಲಾ ಕೂತು ಕೇಳುತ್ತಾಳೆ. ಪತ್ರಿಕೆಯಲ್ಲಿ ಅವನ ಚಿತ್ರ ಬಂದಾಗಲೆಲ್ಲಾ 'ಅಣ್ಣನ ಫೋಟೊ, ಅಲ್ಲಿ ನೋಡು' ಎಂದು ಎಷ್ಟು ಜನಕ್ಕೆ ತೋರಿಸಿದರೂ ತೃಪ್ತಿಯಿಲ್ಲ. ಕಲೆಕ್ಟಿವ್ ಫಾರಂನ ಕಚೇರಿಯಲ್ಲಿ ಅವನ ಫೋಟೊ ಇಟ್ಟ ದಿನವಂತೂ ಜಂಬದ ಕೋಳಿಯ ಹಾಗೆ ಕುಣಿದದ್ದೂ ಕುಣಿದದ್ದೇ. ಅವಳ ಹೆಮ್ಮೆ ಹೇಳಿತೀರದು.''

ಅಲೆಕ್ಸಿ ಗೋಡೆಯ ಮೇಲಿದ್ದ ತನ್ನ ಫೋಟೋ ಕಡೆ ನೋಡಿದ. ಅದಕ್ಕೆ ಕಾಗದದ ಹೂವುಗಳನ್ನೂ ರಿಬ್ಬನ್‌ಗಳನ್ನೂ ಹಾಕಿ ಅಲಂಕರಿಸಿದ್ದರು.

"ಕಚೇರಿಯಲ್ಲಿ ಹಾಕಿರುವ ಫೋಟೋ ಕೂಡ ಇದರ ಹಾಗೇ ಇದೆ. ತದ್ವತ್ತು ಅವನೇ ಎದ್ದು ಬಂದಹಾಗಿದೆ. ಏನಪ್ಪಾ, ನನ್ನ ಮಗ ಈಗಲೂ ಹಾಗೆ ಕಾಣುತ್ತಾನೆಯೆ?"

"....ಕಚೇರಿ ಮೊದಲಿದ್ದ ಸ್ಥಳದಲ್ಲೇ ಇದೆಯೊ?"

"ಇಲ್ಲವಪ್ಪ. ಕಚೇರಿ, ಶಾಲೆ, ಓದುವಮನೆ—ಎಲ್ಲವನ್ನೂ ಜರ್ಮನರು ಸುಟ್ಟುಬಿಟ್ಟರು. ಆದರೇನು, ಈಗ ಮತ್ತೆ ಕಟ್ಟುತ್ತಾ ಇದೇವೆ. ನಾಸ್ತ್ಯ ಬೆಳಗಿನಿಂದ ಸಂಜೆಯವರೆಗೂ ಅದನ್ನೇ ನೋಡಿಕೊಳ್ಳುತ್ತಾ ಇದಾಳೆ. ಈಗ ಕಚೇರಿ ಬಾಟ್ರಾಕನ ಮನೆಯಲ್ಲಿ ನಡೆಯುತ್ತಾ ಇದೆ. ಅವನ ಮಕ್ಕಳಿಬ್ಬರೂ ಯುದ್ಧಕ್ಕೆ ಹೋಗಿದಾರೆ—ಸತ್ತೇಹೋದರು

ಅಂತ ವರ್ತಮಾನ. ಬಾಟ್ರಾಕ್ ಪಾರ್ಟಿಗೆ ಸೇರಿಬಿಟ್ಟಿದಾನೆ. ಅದು ಜರ್ಮನರಿಗೆ ಗೊತ್ತಾಗಿ ಅವನ ಮನೆಯನ್ನೂ ಸುಡುವುದರಲ್ಲಿದ್ದರು. ಅಷ್ಟರಲ್ಲೇ ನಮ್ಮ ಸೈನ್ಯ ಬಂದು ಕಾಪಾಡಿತು."

ಅಲೆಕ್ಸಿ ಮೇಲೆಕ್ಕೆದ್ದ.

" ಏನು, ಆಗಲೇ ಹೊರಟುಬಿಟ್ಟಿರಾ ? "

" ಹೋಗಿ ನಾಸ್ . . . ನಾಸ್ತ್ಯಾಸ್ಯ ಮಿಖೆಲೋವ್ನಳಿಗೆ ಪತಿಯ ವರ್ತಮಾನ ತಿಳಿಸಬೇಕು.''

" ಅವಳು ಸಿಕ್ಕುವುದೇ ದೊಡ್ಡ ಕಷ್ಟ. ವಿಪರೀತ ಕೆಲಸ. ಕತ್ತು ಮುರಿದ ಕೋಳಿಯ ಹಾಗೆ ತಿರುಗುತ್ತಾ ಇರಬೇಕು. ಈಗ ಹೊಲ, ಇನ್ನೊಂದು ಕ್ಷಣಕ್ಕೆ ಫಾರಂ, ಅಲ್ಲಿಂದ ಸೋವಿಯಟ್—ಒಂದು ಘಳಿಗೆ ಒಂದು ಕಡೆ ನಿಲ್ಲುವುದಿಲ್ಲ. ಬೆಳಗಿಂದ ಸಂಜೆಯವರೆಗೂ ಹಾಗೇ. ಒಂದೊಂದುದಿನ ಮಲಗುವುದಕ್ಕೂ ಮನೆಗೆ ಬರುವುದಿಲ್ಲ. ಮಕ್ಕಳ ಯೋಗಕ್ಷೇಮ ನೋಡುವುದಕ್ಕೆ ಒಂದು ಸಲ ತಲೆಹಾಕಿ ಮತ್ತೆ ಹೊರಟು ಹೋಗುತ್ತಾಳೆ."

೨

ಆಕೆ ಹೇಳಿದಮಾತು ನಿಜವಾಯಿತು. ಅಧ್ಯಕ್ಷೆ ಎಲ್ಲಿದ್ದಾಳೆ ಎಂದು ಯಾರನ್ನು ಕೇಳಿದರೂ ಇಲ್ಲಿರಬಹುದು ಅಲ್ಲಿರಬಹುದು ಎನ್ನುವರೇ ಹೊರತು ಇಂಥ ಕಡೆಯಲ್ಲೇ ಸಿಕ್ಕುತ್ತಾಳೆಂದು ಯಾರೂ ಹೇಳಲಾರರು. ಆಕೆಯನ್ನು ಹುಡುಕುತ್ತಿರುವಾಗ ಮತ್ತೆ ಕ್ರಯಾಷ್ಕ ಸಿಕ್ಕಲು ಅಲೆಕ್ಸಿ ಅವನನ್ನೇ ಕೇಳಿದನು.

'' ಬಹುಶಃ ಕುಲುಮೆಯ ಬಳಿ ಸಿಕ್ಕಬಹುದು. ಅಲ್ಲಿಲ್ಲದಿದ್ದರೆ ಕಣಜದ ಬಳಿ ಇರಬೇಕು. ಏತಕ್ಕೆ ? ''

" ಅವರೊಡನೆ ಸ್ವಲ್ಪ ಕೆಲಸವಿತ್ತು."

" ಏನು ಕೆಲಸ ? ಆಕೆಗೆ ಈಗಾಗಲೇ ಸಾಕಾದಷ್ಟು ಕೆಲಸವಿದೆ."

ಅಲೆಕ್ಸಿ ಮುಂದೆ ನಡೆದನು. ಅಲ್ಲಿಂದ ಆಚೆ ಸ್ವಲ್ಪ ದೂರದಲ್ಲಿ ಒಂದು ಮನೆಯ ಹತ್ತಿರ ಹೋಗುತ್ತಿದ್ದಾಗ ಅಂಗಳದಿಂದ ಯಾರೋ ಹೆಂಗಸಿನ ನಗು ಕೇಳಿಬಂತು. ಅಲ್ಲಿಯೇ ನಿಂತನು. ವಿಮಾನಗಳ

ಗರ್ಜನೆ, ಬಾಂಬುಗಳ ಆಸ್ಫೋಟನೆ, ಸಿಡಿ ಗುಂಡುಗಳ ಶಬ್ದ—ಇವುಗಳ ನಡುವೆಯೂ ಅವನ ಕಿವಿಗೆ ಆ ನಗೆ ದೂರವಾಗಿರಲಿಲ್ಲ. ಆ ಮನೆಯ ಗುರುತಾಯಿತು.—ತನ್ನ ಮಿತ್ರ ಪಾವೆಲನಿಗೆ ಸೇರಿದ್ದು. ಬಾಗಿಲಿನ ಬಳಿಯಲ್ಲೇ ಎಂದಿನಂತೆ ಹಸನ್ಮುಖಿಯಾಗಿ ನಿಂತಿದ್ದ ಪಾವೆಲ ನೊಡನೆ ನಾಸ್ತ್ಯ ಮಾತಾಡುತ್ತಿದ್ದಳು. ಅವನು ಏನೋ ನಗು ಬರು ವಂಥ ವಿಷಯ ಹೇಳುತ್ತಿದ್ದಿರಬೇಕು. ಅಲೆಕ್ಸಿ ಬಂದದ್ದನ್ನು ಕಾಣದೆ ಆಕೆ ಇನ್ನೂ ನಗುತ್ತಿದ್ದಳು. ಅವನನ್ನು ನೋಡಿದ ಮೇಲೆ ಅವಳ ನಗು ಬಾಡಿ ಹೋಗಿ ಕನಿಕರಕ್ಕೆ ಎಡೆಗೊಟ್ಟಿತು. ಆ ಬಗೆಯ ಕನಿಕರದ ಅನು ಭವ ಅಲೆಕ್ಸಿಗೆ ಈಗಾಗಲೇ ಎಷ್ಟೋ ಸಲ ಆಗಿತ್ತು. ಆದರೆ ತನ್ನ ಹೃದಯದ ದೇವಿಯ ಮುಖದಲ್ಲಿ ಅದು ಮೂಡಿ ಬಂದರೆ! ಅವನು ತನ್ನ ಕಡೆಗೇ ಬಂದದ್ದನ್ನು ನೋಡಿ ಆಶ್ಚರ್ಯದಿಂದ ಆಕೆಯ ಹುಬ್ಬು ಏರಿತು. ಅವಳೊಡನೆ ಏನಾದರೂ ಮಾತಾಡಬೇಕು; ಆದರೆ ನಾಲಿಗೆ ಕಟ್ಟಿಹೋಗಿತ್ತು. ಹೇಗೋ ಮನಸ್ಸನ್ನು ಬಿಗಿಹಿಡಿದನು.

"ನಾಸ್ತ್ಯಾಸ್ಯ ಮಿಖೆಲೋವ್ನ, ಅಲ್ಲವೆ?"

"ಏನು ವಿಷಯ?" ಒಂದೆರಡು ಕ್ಷಣ ಅವನ ಮುಖವನ್ನು ದಿಟ್ಟಿಸಿ ನೋಡಿದಳು. ಅಲೆಕ್ಸಿಗೆ ಅದು ಭಯಂಕರವಾದ ಕಾಲ, ತನ್ನ ಜೀವನದ ಭವಿಷ್ಯವನ್ನು ನಿರ್ಧರಿಸುವ ಕಾಲ.

"ನಾನು....ನಿಮಗೆ ಒಂದು ಕಾಗದ ತಂದಿದ್ದೇನೆ."

"ಯಾರಿಂದ?"

"ಅಲೆಕ್ಸಿಯಿಂದ. ಅವನು ಆಸ್ಪತ್ರೆಯಲ್ಲಿದ್ದಾನೆ." ಆಕೆಯ ಮುಖ ಥಟ್ಟನೆ ಬಿಳಿಚಿಕೊಂಡು ಕಾಂತಿಹೀನವಾಯಿತು.

"ಅವರಿಗೆ ಏನಾಗಿದೆ?"

"ಏನೂ ಇಲ್ಲ, ಈಗ ಹುಷಾರಾಗಿದ್ದಾನೆ. ನಿಮಗೆ ಒಂದು ಕಾಗದ ಬರೆದಿದ್ದಾನೆ."

"ಹೌದು, ಆ ಕಾಗದ ಬಂತು....."

"ಅದಲ್ಲ, ಈಗ ನನ್ನೊಡನೆ ಇನ್ನೊಂದು ಕಾಗದ ಕಳಿಸಿದ್ದಾನೆ." ಬರೆದು ಸಿದ್ಧವಾಗಿಟ್ಟುಕೊಂಡಿದ್ದ ಕಾಗದವನ್ನು ಅವಳಿಗೆ ಕೊಟ್ಟನು.

ಅವಳು ಅದನ್ನು ಓದಿ ಜೇಬಿಗೆ ಹಾಕಿಕೊಂಡಳು.

"ಹಿಂದಿನ ಕಾಗದದಲ್ಲಿ ರಜ ಪಡೆದು ಮನೆಗೆ ಬರುತ್ತೇನೆಂದು ಬರೆದಿದ್ದರು. ಇದರಲ್ಲಿ ಪುನಃ ಯುದ್ಧರಂಗಕ್ಕೆ ಹೋಗುತ್ತೇನೆಂದು ಬರೆದಿದ್ದಾರಲ್ಲ! ನೀವು ಆಸ್ಪತ್ರೆಯಲ್ಲಿ ಅವರ ಜೊತೆ ಇದ್ದಿರಾ? ನೀವು ಯಾರು?"

"ಹೌದು, ಜೊತೆಯಲ್ಲೇ ಇದ್ದೆ. ಜೊತೆಯಾಗಿಯೇ ಹೋರಾಡಿದೆವು; ಆಸ್ಪತ್ರೆಯಲ್ಲೂ ಜೊತೆಯಾಗಿಯೇ ಮಲಗಿದ್ದೆವು."

"ಯುದ್ಧದಲ್ಲೂ ಅವರ ಜೊತೆ ಇದ್ದಿರಾ?"

"ಹೌದು. ಅಂದರೆ . . . ಒಂದೇ ಟ್ಯಾಂಕ್ ಪಡೆಯಲ್ಲಿ. ಅವನಿಗೆ ಸ್ವಲ್ಪ ಗಾಯವಾಯಿತು."

"ನೀವು?"

"ನಿಮಗೇ ಕಾಣುತ್ತದಲ್ಲ! ನನ್ನ ಮುಖವೆಲ್ಲಾ ಸುಟ್ಟು ಹೋಯಿತು. ಹೇಗೋ ಗುಣಮಾಡಿದರು."

ಆ ವೇಳೆಗೆ ಕಲೆಕ್ಟಿವ್ ಫಾರಮಿನ ವಿಷಯಗಳಲ್ಲಿ ಆಕೆಯ ಅಪ್ಪಣೆ ಪಡೆಯಲು ಕೆಲವರು ರೈತರು ಬಂದರು. ಅವರಿಗೆ ಹೇಳಬೇಕಾದ್ದನ್ನು ಹೇಳಿ ಮತ್ತೆ ಅಲೆಕ್ಸಿಯ ಕಡೆ ತಿರುಗಿದಳು.

"ಈಗ ಎಲ್ಲಿಗೆ ಹೊರಟಿದ್ದೀರಿ, ಕಾಮ್ರೇಡ್?"

"ಮನೆಗೆ . . . ಡೋನ್‌ಬಾಸ್‌ಗೆ. ನಿಮಗೆ ಅಲೆಕ್ಸಿಯ ವರ್ತಮಾನವನ್ನೂ ಕಾಗದವನ್ನೂ ತಲುಪಿಸಿ ಹೋಗೋಣವೆಂದು ಇಲ್ಲಿ ನಿಂತೆ."

"ಕ್ಷಮಿಸಬೇಕು, ಈಗಿನ ಕಾಲದಲ್ಲಿ ಕೆಲಸಕಾರ್ಯ ಎಷ್ಟಿದೆಯೆನ್ನುವುದು ನಿಮಗೆ ತಿಳಿದೇ ಇದೆ. ಆದರೆ ನಿಮ್ಮೊಡನೆ ಇನ್ನೂ ಮಾತಾಡಬೇಕು. ನಮ್ಮ ಮನೆಗೆ ಬಂದು ಸ್ವಲ್ಪ ವಿಶ್ರಮಿಸಿಕೊಳ್ಳಬಾರದೆ?"

"ಆಗಬಹುದಾಗಿತ್ತು. ಆದರೆ ಇಂದು ಸಂಜೆಯ ರೈಲು ಹತ್ತಬೇಕು. ಈಗಲೇ ಇಲ್ಲಿಂದ ಹೊರಟರೆ ರೈಲಿನ ಹೊತ್ತಿಗೆ ಸ್ಟೇಷನ್ನಿಗೆ ಹೋಗಬಹುದು."

"ಮುಂದಿನ ರೈಲಿಗೆ ಹೊರಡಬಹುದಲ್ಲ? ನಮ್ಮ ಮನೆ ಹತ್ತಿರ

ದಲ್ಲೇ ಇದೆ.

"ಮನೆಗೆ ಆಗಲೇ ಹೋಗಿದ್ದೆ.''

"ಬಹಳ ಸಂತೋಷ. ಈಗ ನಾನು ಸ್ವಲ್ಪ ಜರೂರಾಗಿ ಕಚೇರಿಗೆ ಹೋಗಬೇಕಾಗಿದೆ. ನೀವೂ ಆ ಕಡೆ ಬರುವುದಾದರೆ ಮಾತಾಡುತ್ತ ಹೋಗಬಹುದು.''

ಆದರೆ ದಾರಿಯುದ್ದಕ್ಕೂ ಜನರು ಆಕೆಯ ಸಲಹೆಗಾಗಿ ಬರುತ್ತಲೇ ಇದ್ದುದರಿಂದ ಅಲೆಕ್ಸಿಗೆ ಮಾತಾಡಲು ಅವಕಾಶ ಸಿಕ್ಕಲಿಲ್ಲ. ಆಕೆಯನ್ನು ಮಾತಾಡಿಸಿದವರೆಲ್ಲ ಅವನಿಗೆ ಹಿಂದಿನಿಂದ ಪರಿಚಿತರಾದವರೇ. ಆದರೂ ಈಗ ಅವರ ನಡುವೆ ಅಲೆಕ್ಸಿ ಒಂಟಿಯಾಗಿ ಅಪರಿಚಿತ ವ್ಯಕ್ತಿಯಾದನು. ನಾಸ್ಟ್ಯಳ ಮುಖದ ಮೇಲೆ ಎಂದಿನಂತೆ ಮೃದುವಾದ ಮೆಲುನಗೆ, ಚಟುವಟಿಕೆ, ಕೆಲಸದ ಶ್ರದ್ಧೆ, ದೃಢಮನಸ್ಕರಿಗಿರುವ ಕಳೆ. ಅದನ್ನು ನೋಡಿದಾಗ ಅವನ ಮನಸ್ಸಿನಲ್ಲಿ ಆನಂದದ ತರಂಗವೆದ್ದು ಹೃದಯದ ದುಃಖವನ್ನು ಕೊಚ್ಚಿಕೊಂಡು ಹೋಯಿತು.

ಕಚೇರಿಯಲ್ಲಿ ತೂಗುಹಾಕಿದ್ದ ತನ್ನ ಫೋಟೋ ಕಣ್ಣಿಗೆ ಬಿತ್ತು; ಬಣ್ಣ ಹಾಕಿ ರಿಬ್ಬನ್‌ಗಳಿಂದ ಅಲಂಕೃತವಾದ ಫೋಟೊ. ಗಿಲೀಟಿನ ಚೌಕಟ್ಟಿನೊಳಗಿಂದ ತನ್ನ ಕಡೆ ಮೆಲುನಗೆ ಬೀರುತ್ತಿದ್ದ ಆ ಮುಖದಲ್ಲಿ ಯೌವನದ ಕಳೆಯಿತ್ತು; ಚಿಂತೆಯ ಸುಳಿವೂ ಇಲ್ಲ; ಸುಂದರವಾದ ಮುಂಗುರುಳು, ಕೆಂಪಗೆ ಕಾಂತಿಯುಕ್ತವಾದ ಕೆನ್ನೆಗಳು.

ನಾಸ್ಟ್ಯ ಅಲ್ಲಿದ್ದವರನ್ನೆಲ್ಲಾ ಕೂಗಿ "ಇವರು ನಮ್ಮ ಆಲ್ಯೋಷನ ಸ್ನೇಹಿತರು. ಯುದ್ಧರಂಗದಲ್ಲಿ ಅವರ ಜೊತೆಯಲ್ಲೇ ಇದ್ದರು" ಎಂದು ಪರಿಚಯ ಮಾಡಿಕೊಟ್ಟಳು.

ಎಲ್ಲರೂ ಅವನನ್ನು ಮುತ್ತಿಕೊಂಡು ಅವನ ಕೈ ಕುಲುಕಿದರು. ಬಹುಮಟ್ಟಿಗೆ ಎಲ್ಲರೂ ಪರಿಚಿತರೇ. ಅವರ ಜೊತೆಯಲ್ಲಿದ್ದ ಕ್ರಯಾಷ್ಕ "ಇದೇನು ಕಾಮ್ರೇಡ್, ನಿನ್ನ ಮುಖ ಒಂದೊಂದು ಭಾಗ ಒಂದೊಂದು ತರಹ ಕಾಣುತ್ತದಲ್ಲ?" ಎಂದನು. ಅಲೆಕ್ಸಿ ಉತ್ತರ ಕೊಡುವುದಕ್ಕೆ ಮುಂಚೆಯೇ ಉಳಿದವರೆಲ್ಲಾ ಪ್ರಶ್ನೆಗಳ ಸುರಿಮಳೆ ಕರೆದರು. ಅವರಿಗೆ ತಮ್ಮ ಆಲ್ಯೋಷ ಶೌರ್ಯ ಪ್ರದರ್ಶನಮಾಡಿ ಪ್ರಶಸ್ತಿಪಡೆದ ಕದನದ

ಕಥೆಯನ್ನು ಕೇಳುವ ಆತುರ. ಅಲೆಕ್ಸಿ ತನಗೆ ತಿಳಿದಷ್ಟನ್ನು ಹೇಳಿದನು. ಅದಕ್ಕಿಂತ ಹೆಚ್ಚಿನ ವಿಷಯ ಅವರಿಗೆ ಮೊದಲೇ ಗೊತ್ತಿತ್ತು. ಅಲೆಕ್ಸಿ ಹೇಳದೆ ಬಿಟ್ಟ ಅಂಶಗಳನ್ನೆಲ್ಲಾ ಅವರೇ ಹೇಳಿದರು. ಅವನು ಹೇಳಿದ ಕಥೆ ತೀರ ಅಲ್ಪವಾಗಿಯೂ ಅಸಂಬದ್ಧವಾಗಿಯೂ ಕಂಡು ಅವರಿಗೆ ಅದರಿಂದ ತೃಪ್ತಿಯಾಗಲಿಲ್ಲ.

" ಅಲೆಕ್ಸಿ ತನ್ನ ಟ್ಯಾಂಕನ್ನು ಕಮರಿಯ ಮೇಲೆ ನಡೆಸಿ ನುಗ್ಗಲಿಲ್ಲವೆ? ಜರ್ಮನ್ ಟ್ಯಾಂಕುಗಳು ನೀವು ಹೇಳಿದ್ದಕ್ಕಿಂತ ಹೆಚ್ಚಾಗಿದ್ದವು, ನಮಗೆ ಗೊತ್ತು. ನಮ್ಮ ಆಲ್ಯೋಷ ಮಾಡಿದ ಕೆಲಸ ಏನೋ ಸಾಧಾರಣವಾದದ್ದು ಎನ್ನುವ ಹಾಗೆ ಹೇಳಿಬಿಟ್ಟಿರಲ್ಲ!" ಎಂದು ಅವರೆಲ್ಲಾ ಆಕ್ಷೇಪಿಸಿದರು. ಆಮೇಲೆ ಪಾವೆಲ್ ಆ ಕಥೆಯನ್ನು ತಾನೇ ಹೇಳಿದನು. ಅವನಿಗೆ ಅಲೆಕ್ಸಿಯ ಶೌರ್ಯವನ್ನು ಬಣ್ಣಿಸುವುದೆಂದರೆ ಹೆಮ್ಮೆ. ಅವನ ವರ್ಣನೆಯ ವೈಖರಿಯಿಂದ ಕದನದ ಚಿತ್ರ ಎಲ್ಲರ ಕಣ್ಣಿಗೂ ಕಟ್ಟಿದಂತಾಯಿತು. ಎಲ್ಲರೂ ಸ್ತಬ್ಧರಾಗಿ ಕೇಳುತ್ತ ನಿಂತರು. ನಾಸ್ತ್ಯ ಹೊಳೆಯುವ ಕಣ್ಣುಗಳಿಂದ ಕಥೆಗಾರನನ್ನೇ ನೋಡುತ್ತಿದ್ದಳು.

" ಕದನ ನಡೆದದ್ದು ಹೀಗೆ, ನೀವು ಹೇಳಿದ ಹಾಗಲ್ಲ" ಎಂದು ಪಾವೆಲ್ ಅಸಮಾಧಾನದ ಧ್ವನಿಯಿಂದ ಅಲೆಕ್ಸಿಗೆ ಹೇಳಿದನು.

ಅಲೆಕ್ಸಿಗೆ ಹಿಂದಿನ ದಿನಗಳ ನೆನಪಾಯಿತು. ಅವನೂ ಪಾವೆಲನೂ ನಾಸ್ತ್ಯಳ ಪ್ರೇಮಕ್ಕೆ ಸ್ಪರ್ಧಿಗಳಾಗಿದ್ದರು. ಅವಳು ಅಲೆಕ್ಸಿಯನ್ನು ಮದುವೆಯಾದಳು. ಪಾವೆಲ್ ಬ್ರಹ್ಮಚಾರಿಯಾಗಿಯೇ ನಿಂತನು. ಆದರೆ ಅವನ ಮನಸ್ಸಿನಲ್ಲಿ ವೈಷಮ್ಯವೇನೂ ಇರಲಿಲ್ಲ. ಮದುವೆಯಾದ ಮೇಲೆ ಅಲೆಕ್ಸಿಯ ಮತ್ತು ಪಾವೆಲನ ಸ್ನೇಹ ಮೊದಲಿಗಿಂತಲೂ ಗಾಢವಾಗಿಯೇ ಬೆಳೆದಿತ್ತು.

ಅಲೆಕ್ಸಿಯ ವಿಕಾರವಾದ ಮುಖದ ಮೇಲೆ ಒಂದು ಬಗೆಯ ನಗು ಮೂಡಿತು. " ಯುದ್ಧದಲ್ಲಿ ಕಾದಿದವರಿಗಿಂತ ಪ್ರೇಕ್ಷಕರಿಗೇ ಹೆಚ್ಚು ವಿಷಯ ತಿಳಿದಿರುವಂತೆ ತೋರುತ್ತದೆ" ಎಂದನು. ಅವನ ಮುಖವನ್ನು ನೋಡಿದಾಗ ಅಲ್ಲಿ ನೆರೆದವರ ಮನಸ್ಸು ಸ್ವಲ್ಪ ನೊಂದಹಾಗಾಯಿತು. ಪಾವೆಲ್ ಮತ್ತೆ ಮೃದುವಾದ ಧ್ವನಿಯಿಂದ " ನನ್ನ ಮಾತಿ

ನಿಂದ ನಿಮಗೆ ಅಸಮಾಧಾನವಾಯಿತೋ ಏನೊ. ನಿಮ್ಮ ಶೌರ್ಯ ವನ್ನೂ ದೇಶಕ್ಕಾಗಿ ನೀವು ಗಾಯ ಹೊಂದಿರುವುದನ್ನೂ ನೆನೆದಾಗಲೆಲ್ಲ ನಿಮ್ಮ ವಿಷಯದಲ್ಲಿ ಗೌರವ ಉಕ್ಕುತ್ತದೆ. ಆದರೆ ಅಲೆಕ್ಸಿ ನಮ್ಮ ಊರಿನ ವೀರ, ನಾವೆಲ್ಲ ಅವನೊಡನೆ ಬೆಳೆದವರು. ನನಗಂತೂ ಅವನು ಆಪ್ತಮಿತ್ರ. ಅವನ ಸೇವೆ ನಮಗೆಲ್ಲಾ ಹೆಮ್ಮೆ ತರುವಂಥಾದ್ದು. ಅವನ ಶೌರ್ಯಕ್ಕೆ ನೀವು ಸಾಕಾದಷ್ಟು ಗೌರವ ಕೊಡಲಿಲ್ಲವೆಂದು ನಮ್ಮ ಮನಸ್ಸು ಸ್ವಲ್ಪ ಚಿಕ್ಕದಾಯಿತು, ಅಷ್ಟೆ" ಎಂದನು.

ನಾಸ್ಟ್ಯ ಮಧ್ಯೆ ಮಾತು ಹಾಕಿದಳು. "ಅವರೇನೂ ಗೌರವವಿಲ್ಲದೆ ಮಾತಾಡಲಿಲ್ಲ. ತಮ್ಮ ಟ್ಯಾಂಕಿನಿಂದ ಕಂಡದ್ದನ್ನು ಮಾತ್ರ ಅವರು ಹೇಳಿದರು. ಅಲ್ಲದೆ ಅವರೂ ಆ ಕಾಳಗದಲ್ಲಿ ಹೋರಾಡಿದವರು, ತಮ್ಮನ್ನು ತಾವೇ ಹೊಗಳಿಕೊಳ್ಳುವುದಕ್ಕೆ ನಾಚಿಕೆಯಾಗುವುದಿಲ್ಲವೆ?"

"ಅದೇನೋ ನಿಜ, ನಾಚಿಕೆಯಾಗುವುದು ಸಹಜ. ಆದರೂ ಅಷ್ಟು ಶೌರ್ಯದಿಂದ ಕಾದಿದ ಮೇಲೆ ಹೆಮ್ಮೆಪಟ್ಟರೇನೂ ತಪ್ಪಲ್ಲ" ಎಂದು ಪಾವೆಲ್ ಅಲೆಕ್ಸಿಯ ಫೋಟೋ ಕಡೆ ನೋಡಿದನು.

ಅಷ್ಟು ಹೊತ್ತಿಗೆ ಕಲೆಕ್ಟಿವ್ ಫಾರಮಿನ ರೈತರು ನಾಸ್ಟ್ಯಳನ್ನು ಸುತ್ತಿಕೊಂಡು ಒಂದು ಸಾವಿರ ಪ್ರಶ್ನೆ ಕೇಳಲಾರಂಭಿಸಿದರು.

೩

ಯಾರ ಗಮನಕ್ಕೂ ಬೀಳದಂತೆ ಕಚೇರಿಯಿಂದ ಹೊರಟು ಅಲೆಕ್ಸಿ ಮತ್ತೆ ಬೀದಿಗೆ ಬಂದನು. ಮನಸ್ಸೂ ಹೃದಯವೂ ಭಾರವಾಗಿದ್ದುವು. ಸುತ್ತಲಿನ ವಿಷಯವೊಂದರ ಕಡೆಗೂ ಗಮನವಿಲ್ಲದೆ ಕಣ್ಣು ಕಿವಿ ಇಲ್ಲದವನಂತೆ ಮುಂದೆ ನಡೆದನು ಎಷ್ಟೋ ದಿನ ತಾನು ಉತ್ಸುಕತೆಯಿಂದ, ಭಯದಿಂದ, ಹಂಬಲಿಸಿ ನಿರೀಕ್ಷಿಸುತ್ತಿದ್ದ ಪುನರ್ದರ್ಶನ ಈಗ ಆದಂತಾಯಿತು. ತಾಯಿಯನ್ನೂ ಹೆಂಡತಿ ಮಕ್ಕಳನ್ನೂ ಮತ್ತೆ ನೋಡುವ ಆ ದೃಶ್ಯ—ಅದನ್ನು ತಾನು ಕಲ್ಪಿಸಿಕೊಂಡದ್ದು ಹೇಗೆ? . . . . ತಾಯಿಯೂ ಹೆಂಡತಿಯೂ ತನ್ನನ್ನು ನೋಡಿದೊಡನೆಯೇ ಗುರುತಿಸುವರು; ಮರುಕ್ಷಣವೇ ಅಸಹ್ಯಮಿಶ್ರವಾದ ಭಯ

ದಿಂದ ಹಿಮ್ಮೆಟ್ಟುವರು. ನಾಸ್ತ್ಯ ಇನ್ನೂ ಚಿಕ್ಕವಳು, ಯುವತಿ, ಸೌಂದರ್ಯಪ್ರೇಮಿ. ಅಂಥವಳು ಜೀವಮಾನವೆಲ್ಲಾ ಅಸಹ್ಯರೂಪಿಯಾದ ತನ್ನಂಥ ವಿಲಕ್ಷಣ ಮೃಗಕ್ಕೆ ಗಂಟುಬಿದ್ದಿರಬೇಕು! ಅಂಥ ಜೀವನವನ್ನು ಸಹಿಸಲಾರೆನೆಂದು ಸ್ಪಷ್ಟವಾಗಿ ಹೇಳಿಬಿಡುವಳೆ, ಅಥವಾ ಬಲಾತ್ಕಾರದಿಂದ ಮನಸ್ಸನ್ನು ಹದಕ್ಕೆ ತಂದುಕೊಳ್ಳುವಳೆ? ಆ ಧರ್ಮ ಸಂಕಟಕ್ಕೆ ಅವಳನ್ನು ಖಂಡಿತ ಸಿಕ್ಕಿಸಬಾರದು.

"ನಾನು ಹೊರಟುಹೋಗುತ್ತೇನೆ. ಅವರ ಮನಸ್ಸು ಹೇಗೇ ಇರಲಿ, ನಾನಾಗಿಯೇ ಹೊರಟು ಹೋಗುತ್ತೇನೆ. . . . ಹೊರಟು ಹೋಗುವುದಾದರೆ ನಾನು ಮನೆಗೆ ತಾನೆ ಏತಕ್ಕೆ ಹೋಗಬೇಕು?"

ಅಲೆಕ್ಸಿ ಆಸ್ಪತ್ರೆಯಿಂದ ಮನೆಗೆ ಹೋಗುವುದೇ ಇಲ್ಲವೆಂದು ನಿರ್ಧರಿಸಿದ್ದನು. ಆದರೆ ಆ ನಿರ್ಧಾರದ ಹಿಂದೆ ಜೀವವೆಲ್ಲಾ ಒಂದೇ ಒಂದು ಹಂಬಲವಾಗಿ ಗಂಟಲಿಗೆ ಒತ್ತಿಕೊಂಡು ಬಂದುನಿಂತಿತು–ತಾಯಿಯನ್ನೂ ಹೆಂಡತಿ ಮಕ್ಕಳನ್ನೂ ಮತ್ತೊಮ್ಮೆ ನೋಡಬೇಕೆಂಬ ಉತ್ಕಟವಾದ ಹಂಬಲು. ಅದನ್ನು ತಡೆಯಲಾರದೆ ಆಸ್ಪತ್ರೆಯಿಂದ ನೇರವಾಗಿ ಮನೆಗೆ ಹೋಗಲು ಏರ್ಪಾಡು ಮಾಡಿಕೊಂಡನು. ಆದರೆ ತಾಯಿಯ ಮತ್ತು ಹೆಂಡತಿಯ ದುಃಖ, ಮಕ್ಕಳ ಕಣ್ಣಿನಲ್ಲಿ ಕಾಣುವ ಅಸಹ್ಯ, ಮತ್ತು ಭಯ—ಈ ದೃಶ್ಯ ಮತ್ತೆ ಮೂಡಿತು. ''ನಾನು ಹೋಗುವುದಿಲ್ಲ'' ಎಂದುಕೊಂಡನು. ಹೀಗೆ ಹೊಯ್ದಾಡುವ ಸ್ಥಿತಿಯಲ್ಲೇ ಮೂರನೆಯ ದಿನ ತನ್ನ ಹಳ್ಳಿಯ ಕಡೆ ಹೋಗುವ ರೈಲನ್ನು ಹತ್ತಿದ್ದಾಯಿತು.

ಆ ದಿನ ಹಳ್ಳಿಯಲ್ಲಿ ನಡೆದು ಬರುತ್ತಿದ್ದಾಗ ಮನೆ ಹತ್ತಿರ ಬಂದ ಹಾಗೆಲ್ಲಾ ಹೆಜ್ಜೆ ಹಿಂಜರಿಯಿತು; ತನ್ನವರನ್ನು ಸಂಧಿಸುವ ಕಾಲ ಆದಷ್ಟು ಮುಂದೆಹೋಗಲಿ ಎನ್ನಿಸಿತು. ರಣಕ್ಷೇತ್ರಕ್ಕೆ ಇಳಿಯುವಾಗ ಸಹ ಅವನ ಮನಸ್ಸಿನಲ್ಲಿ ಅಷ್ಟು ದಿಗಿಲಿರಲಿಲ್ಲ.

ಕೊನೆಗೆ ಅವನು ಕನಸಿನಲ್ಲಿ ಸಹ ಎಣಿಸದೇ ಇದ್ದುದೇ ನಡೆಯಿತು: ಮನೆಯವರು ಯಾರಿಗೂ ಅವನನ್ನು ಗುರುತಿಸಲಾಗಲಿಲ್ಲ. ಮನೆಯವರಿಗೆ ತಿಳಿಯದಂತೆಯೇ ಅವರನ್ನು ನೋಡಿದ್ದಾಯಿತು. ವಿಧಿ ತನ್ನ ಸಮಸ್ಯೆಗೆ ಬಹಳ ಸುಲಭವಾದ, ಆದರೂ ಹೃದಯವಿದ್ರಾವಕವಾದ

ಉತ್ತರಕೊಟ್ಟಂತಾಯಿತು. ಹೆಂಡತಿಯನ್ನು ಪರೀಕ್ಷಿಸಬೇಕಾದ ಸಂದರ್ಭವೇ ಒದಗಲಿಲ್ಲ. ಹಾಗಾದದ್ದೇ ಎಲ್ಲರಿಗೂ ಲೇಸು; ಎಲ್ಲರಿಗೂ ಅನಾವಶ್ಯಕವಾದ ಸಂಕಟ ತಪ್ಪಿದಂತಾಯಿತು. ತಾಯಿಯೇನೊ 'ಮಗ ಇಂದು ಬರುತ್ತಾನೆ, ನಾಳೆ ಬರುತ್ತಾನೆ' ಎಂದು ಸಾಯುವವರೆಗೂ ನಿರೀಕ್ಷೆಯಲ್ಲೇ ಕಾಲ ಕಳೆಯಬೇಕಾಗುತ್ತದೆ, ಕಷ್ಟ . . . ಆದರೂ ಅದೇ ವಾಸಿ. ಮಕ್ಕಳು ಹೇಗೋ ಬೆಳೆದು ದೊಡ್ಡವರಾಗುತ್ತಾರೆ. ಹೆಂಡತಿ ಮತ್ತೆ ಯಾರನ್ನಾದರೂ—ಬಹುಶಃ ಪಾವೆಲನನ್ನು—ಒಲಿಯಬಹುದು. ಅವಳಿಗೆ ಅದೇ ಲೇಸು.

ಹೀಗೇ ಯೋಚನೆಮಾಡುತ್ತಾ ಬಾವಿಯ ಬಳಿಗೆ ಬಂದಾಗ ಒಬ್ಬ ಹುಡುಗ ಅವನನ್ನು ಕೂಗಿದನು.

"ಓ, ಸಿಪಾಯಿ, ನಮ್ಮ ಅಣ್ಣ ಕಳಿಸಿದ್ದು ನಿನ್ನನ್ನೇ ಅಲ್ಲವೆ?"

ಸ್ಟ್ಯೋಪ! ಇವನೇ ತನ್ನ ಆರು ವರ್ಷದ ಮಗ. ಚಳಿಗಾಳಿಗಳ ಹೊಡೆತಕ್ಕೆ ಸಿಕ್ಕಿ ಮಗುವಿನ ಮುಖ ತೆಳ್ಳಗಾಗಿತ್ತು. ಅಲೆಕ್ಸಿ ಯುದ್ಧಕ್ಕೆ ಹೊರಟಾಗ ಸ್ಟ್ಯೋಪ ತಂದೆಯನ್ನು ಅಪ್ಪಿಕೊಂಡು ಕಣ್ಣೀರು ಸುರಿಸಿ "ಅಣ್ಣ, ಯುದ್ಧದಿಂದ ಬೇಗ ಬಂದುಬಿಡುತ್ತೀಯಾ ಅಣ್ಣ ?" ಎಂದು ಅತ್ತಿದ್ದನು. ಆಗ ಬಿರುಕಿಸಿದ್ದ ತುಟಿ ಇನ್ನೂ ಹಾಗೆಯೇ ಇದ್ದಂತೆ ತೋರಿತು.

ಮಗುವಿನೊಡನೆ ಮಾತಾಡುತ್ತ ಅಲೆಕ್ಸಿ ಮನೆಯ ಕಡೆಗೇ ತಿರುಗಿದನು.

"ನಿಮ್ಮ ಅಣ್ಣನ ಕಡೆಯಿಂದ ಬಂದವನು ನಾನೇ ಅಂತ ಹೇಗೆ ಪತ್ತೆಮಾಡಿದೆ, ಮಗು ?"

"ಅಜ್ಜಿ ಹೇಳಿದಳು, ಮುಖ ಭಯಂಕರವಾಗಿದೆ ಅಂತ."

"ಹಾಗಾದರೆ ನಾನು ಭಯಂಕರವಾಗಿದೇನೆಯೆ ?"

"ಅಲ್ಲ, ನೀನಲ್ಲ. ಭಯಂಕರವಾದವರು ಅಂದರೆ ಜರ್ಮನರು. ಅವರೇ ಅಲ್ಲವೆ, ನಿನ್ನ ಹೀಗೆ ಮಾಡಿದವರು ?"

"ಹೌದು ಮಗು, ನಾಜಿಗಳು."

"ಅಣ್ಣನ್ನ ನೀನು ನೋಡಿದೆಯಾ ?"

" ಹೂ, ನೋಡಿದೆ "

" ಅಣ್ಣನಿಗೆ ಬಂದ ಪ್ರಶಸ್ತಿ, ಆ ಚಿನ್ನದ ನಕ್ಷತ್ರ, ಅದೆಲ್ಲಾ ನೋಡಿದೆಯಾ ?''

" ಹೂ, ಅದನ್ನೂ ನೋಡಿದೆ."

" ನಿನಗೂ ಬಂದಿದೆಯೆ, ಅದೆಲ್ಲಾ ?''

" ಹೂ, ಬಂದಿದೆ.''

" ಅಣ್ಣ ಬೇಗ ಬಂದುಬಿಡುತ್ತಾನೆ ಅಲ್ಲವೆ ?''

" ಬರುತ್ತಾನೆ. . . ಅಣ್ಣ ಇಲ್ಲದೆ ಇದ್ದರೆ ನಿನಗೆ ಬೇಜಾರು, ಅಲ್ಲವೆ ಮಗು ? "

'' ಹೌದು, ತುಂಬ ಬೇಜಾರು."

" ನಿಮ್ಮ ಅಣ್ಣನ್ನ ಯುದ್ಧಕ್ಕೆ ಸಾಗಕಳಿಸಿದ್ದು ಜ್ಞಾಪಕವಿದೆಯೆ, ನಿನಗೆ ? "

" ಓಹೋ. ನಾನು ಆಗ ತುಂಬ ಅತ್ತುಬಿಟ್ಟೆ. ನನ್ನ ಎತ್ತಿಕೊಂಡು ಜೋಕಾಲಿ ಮಾಡಿದರೂ ಇನ್ನೂ ಅಳುತಾಲೇ ಇದ್ದೆ. ಅಣ್ಣ ಶೂರನಾಗಿ ಚಿನ್ನದ ನಕ್ಷತ್ರ ತಗೊಂಡು ಬರುತ್ತಾನೆ ಅಂತ ನನಗೆ ಗೊತ್ತಿರಲಿಲ್ಲ. ಅಲ್ಲದೆ ಎಲ್ಲರೂ ಅಳುತ್ತಾ ಇದ್ದರು, ನಾನೂ ಅತ್ತುಬಿಟ್ಟೆ. ನಟಾಷ ಮಾತ್ರ ಅಳಲೇ ಇಲ್ಲ. ಯುದ್ಧ ಅಂದರೆ ಅವಳಿಗೆ ಏನೂ ತಿಳಿಯದು. ಜರ್ಮನರು ಇಲ್ಲಿಗೆ ಬಂದಾಗಲೂ ಅವಳಿಗೆ ಏನೂ ತಿಳಿಯದು ಒಬ್ಬ ಜರ್ಮನ್ ಅಮ್ಮನ್ನ ಕೇಳಿದ, ನಮ್ಮ ಜನ ಎಲ್ಲಾ ಎಲ್ಲಿದಾರೆ ಅಂತ. ಅಮ್ಮ ಮಾತಾಡದೆ ಇದ್ದದ್ದಕ್ಕೆ ಅವನು ಬಂದೂಕ ತೆಗೆದು ನಟಾಷ ಕಡೆಗೆ ಗುರಿಯಿಟ್ಟ. ಅಮ್ಮ ಅವನ ಬಂದೂಕ ನೂಕಿಬಿಟ್ಟಳು. ನಟಾಷ ಹೆಬ್ಬೆಟ್ಟು ಚೀಪುತ್ತಾ ಸುಮ್ಮನೆ ನಿಂತಿದ್ದಳು. ಶುದ್ಧ ಪೆದ್ದು, ಅಲ್ಲವೆ ? ಅಷ್ಟುಹೊತ್ತಿಗೆ ಸರಿಯಾಗಿ ಕ್ರಯಾಷ್ಕ ಬಂದ. ಅಮ್ಮ, ಕ್ರಯಾಷ್ಕ, ಇಬ್ಬರೂ ಸೇರಿ ಅವನನ್ನ ಕಟ್ಟಿಹಾಕಿ ಬಾಯಿಗೆ ಒಂದು ಶಾಲು ತುರುಕಿ ನೆಲಮಾಳಿಗೆಯಲ್ಲಿ ಕೂಡಿಹಾಕಿದರು. ಆಮೇಲೆ ನಾವೆಲ್ಲಾ ಕಾಡಿಗೆ ಓಡಿಬಿಟ್ಟೆವು. ನಮ್ಮ ಸೈನ್ಯ ಬಂದು ಜರ್ಮನರನ್ನು ಓಡಿಸುವ ತನಕ ಅಲ್ಲೇ ಇದ್ದೆವು."

ಕಥೆ ಮುಗಿಯುವ ಹೊತ್ತಿಗೆ ಇಬ್ಬರೂ ಮನೆಗೆ ಬಂದರು. ಅಲೆಕ್ಸಿ ಸ್ಟ್ಯೋಪನಿಗಾಗಿ ತಂದಿದ್ದ ಕೆಲವು ಸಾಮಾನುಗಳನ್ನು ಕೊಟ್ಟು ಅವನ ಜೊತೆಯಲ್ಲಿ ಕೈತೋಟಕ್ಕೆ ಹೋದನು. ಚಳಿಗಾಲದ ಮಂಜು ಕರಗಿ ಕೆಸರಾಗಿದ್ದ ನೆಲ ಈಗ ಒಣಗುತ್ತ ಬಂದಿತ್ತು. ಕಲೆಕ್ಟಿವ್ ಫಾರಮಿನ ಹಣ್ಣಿನ ತೋಟದಲ್ಲಿ ಆಗಲೇ ಮೊಗ್ಗುಗಳು ಅರಳಿದ್ದುವು. ಮಕ್ಕಳು ಸಣ್ಣ ಸಣ್ಣ ಗುಂಡಿಗಳನ್ನು ತೋಡಿ ಕಡ್ಡಿಗಳನ್ನು ನೆಡುತ್ತಿದ್ದರು, ತೋಟದಿಂದಾಚೆ ದಿಗಂತದವರೆಗೂ ಹೊಲಗಳು ಹರಡಿದ್ದುವು. ಒಂದು ಕಡೆ ಸಣ್ಣ ಕಾಡು. ಹೊಲದ ಮೇಲೆಲ್ಲಾ ವಸಂತಕಾಲದ ಗಾಳಿ ಅಲೆ ಯಲೆಯಾಗಿ ಬೀಸುತ್ತಿತ್ತು. ಅಲ್ಲಲ್ಲಿಯೇ ಬಿಸಿಲಿನಲ್ಲಿ ಚಲಿಸುತ್ತಿದ್ದ ನೇಗಿಲುಗಳ ಹೊಳಪು ಕಾಣುತ್ತಿತ್ತು. ಎರಡು ವರ್ಷಗಳ ಹಿಂದೆ ತಾನು ಆ ಹೊಲಗಳನ್ನು ಬಿಟ್ಟು ದೂರದ ರಣರಂಗಕ್ಕೆ ಪ್ರಯಾಣಮಾಡಿದಾಗ ಎಲ್ಲೆಲ್ಲಿಯೂ ಚಿನ್ನದಂತೆ ಹೊಳೆಯುವ ಧಾನ್ಯದ ತೆನೆಗಳು ತುಂಬಿ, ಭಾರದಿಂದ ಬಾಗಿ ಗಾಳಿಯಲ್ಲಿ ತೂಗುತ್ತಿದ್ದುವು. ಈಗ ಮತ್ತೆ ಹೊಲ ಗಳೆಲ್ಲಾ ತಮ್ಮ ಯಜಮಾನನಿಗಾಗಿ ಕಾದಿದ್ದಂತೆ ತೋರಿತು. ಅವುಗ ಳೆದುರಿಗೆ ನಿಂತರೆ ಪೂರ್ವಸ್ನೇಹಿತರನ್ನು ಮತ್ತೆ ಭೇಟಿಮಾಡಿದಂತಾ ಯಿತು.

ಉದ್ದಕ್ಕೂ ಸ್ಟ್ಯೋಪ ತನ್ನ ಅಣ್ಣನ ಕಥೆಯನ್ನು ಕೇಳುತ್ತಲೇ ಇದ್ದನು. ಅಲೆಕ್ಸಿ ಹೆಚ್ಚು ಮಾತಾಡದಿದ್ದರೂ ಮಗನ ಕೆಂಪೇರಿದ ಕೆನ್ನೆಗಳನ್ನೂ ಹೊಳೆಯುವ ಕಣ್ಣುಗಳನ್ನೂ ಮತ್ತೆ ಮತ್ತೆ ನೋಡು ವನು.

ಅಲೆಕ್ಸಿ ಹೊಲಗಳ ಬಳಿ ನಿಂತಾಗ ಸ್ಟ್ಯೋಪ ಅವನ ತೊಡೆಗೆ ಮುಖವನ್ನೊತ್ತಿ “ ನಮ್ಮ ಅಣ್ಣನಿಗಾಗಿ ನಾನು ಸೇಡು ತೀರಿಸಿಕೊಳ್ಳು ತ್ತೇನೆ ” ಎಂದನು.

ಊರನ್ನು ಬಿಟ್ಟು ಹೊರಟು ಹೋಗೋಣವೆಂದರೆ ಕಾಲು ಕದಲುವುದು ಅದೆಷ್ಟು ದುಸ್ತರ! ಅಲೆಕ್ಸಿ ಒಂದು ಗುದ್ದಲಿಯನ್ನೆತ್ತಿ ಕೊಂಡು ತಾನೂ ಒಂದು ಗುಂಡಿ ತೆಗೆಯಲಾರಂಭಿಸಿದನು. ಮಣ್ಣು ತೆಗೆದಾಗ ಎದ್ದ ವಸಂತದ ಗಂಧ ಅವನನ್ನು ಮುತ್ತಿ ತಲೆ ತಿರುಗುವಂತೆ

ಮಾಡಿತು. ಅಲೆಕ್ಸಿಯ ಸಂಕಟವೆಲ್ಲಾ ಮರೆತುಹೋಗಿ ಹರ್ಷವುಕ್ಕಿತು. ತಾನು ಸಂಕಟಪಟ್ಟಿದ್ದೂ ಹೃದಯದ ರಕ್ತವನ್ನು ಚೆಲ್ಲಿದ್ದೂ ವ್ಯರ್ಥವಲ್ಲ." ತನ್ನನ್ನು ಯಾರು ಮರೆತರೂ ಆ ನೆಲ ಮರೆತಿಲ್ಲ; ಅದು ಎಂದಿಗೂ ತನ್ನನ್ನು ನಿರಾಕರಿಸಿ ಹೊರದೂಡುವುದಿಲ್ಲ. ಆ ಮಣ್ಣು ತನ್ನನ್ನು ಅಪ್ಪಿದರೆ ಅದೊಂದು ಬಹುಮಾನವೇ ಸಾಕು. ಅಪರಿಚಿತನಂತಾದರೂ ಹಳ್ಳಿಯಲ್ಲೇ ಏಕಿದ್ದುಬಿಡಬಾರದು? ದುಂಬಿಯಂತೆ ಅಲ್ಲಿಯ ಗಾಳಿಯನ್ನು ಸೇವಿಸಿ, ಶಬ್ದಗಳನ್ನು ಆಲಿಸಿ, ತೋಟದ ಹೂವುಗಳನ್ನು ಕಣ್ಣಿಂದ ನೋಡುತ್ತಿದ್ದರೆ ಸಾಕು! . . . ಇಲ್ಲ ಸಾಲದು, ನೋಡುವುದರ ಜೊತೆಗೆ ದುಡಿಯಬೇಕು. ತಾನು ಗಂಡಸಲ್ಲವೆ? ತನ್ನ ಹರ್ಷದ ದುಡಿಮೆಗಾಗಿ ಆ ನೆಲವೂ ಹಳ್ಳಿಯ ಜನರೂ ಕಾದಿದ್ದಾರೆ.

ಅಲೆಕ್ಸಿಯ ತಾಯಿ ಅಲ್ಲಿಗೆ ಬಂದಳು.

"ಹಿಂದಿನಿಂದ ನಿನ್ನನ್ನೇ ನೋಡುತ್ತಿದ್ದೆ—ನನ್ನ ಆಲ್ಯೋಷನೇ ಬಂದು ನಿಂತ ಹಾಗಿದೆ. ನಿನ್ನ ಬೆನ್ನು, ನೀನು ಅಗೆಯುವ ರೀತಿ, ಎಲ್ಲಾ ಅವನಂತೆಯೇ. ನಿನಗೂ ಹೆಂಡತಿಮಕ್ಕಳಿದ್ದಾರೆಯೇ, ಮಗು?"

"ಹೌದಮ್ಮ, ತಾಯಿಯೂ ಇದ್ದಾಳೆ."

"ನಿನ್ನನ್ನು ಮತ್ತೆ ಕಂಡ ದಿನ ಆಕೆ ಎಷ್ಟು ಸಂತೋಷಪಡುವಳೋ. . . ಜೊತೆಗೆ ಎಷ್ಟು ಕಣ್ಣೀರು ಸುರಿಸುವಳೊ, ಪಾಪ!"

"ನಾನು ಆಕೆಯನ್ನು ನೋಡುವುದಿಲ್ಲ. ಅವಳ ಮನಸ್ಸು ಮತ್ತೆ ಕದಡದೆ ಸುಖವಾಗಿರಲಿ."

"ಸುಖವೆಲ್ಲಿ ಬಂತು, ಮಗು, ಹೃದಯ ದುಃಖದಿಂದ ಒಣಗಿ ಹೋಗಿರುವಾಗ?"

"ಅದೇ ಲೇಸು, ತಾಯಿ. ಹೃದಯ ಒಡೆಯುವುದಕ್ಕಿಂತ ಒಣಗುವುದೇ ಲೇಸು."

"ಹಾಗೆ ಹೇಳುವುದಕ್ಕಾಗುವುದಿಲ್ಲವಪ್ಪ, ನಿನಗೇನು ಗೊತ್ತು! ನಿಮ್ಮನ್ನು ಇಂಥ ಸಂಕಟಕ್ಕೆ ಗುರಿಮಾಡುವುದಕ್ಕಿಂತ ನಾವು ಮಕ್ಕಳನ್ನು ಹೆರದಿರುವುದೇ ಲೇಸು" ಎಂದು ಆಕೆ ಬಿಸಿಯುಸಿರು ಬಿಟ್ಟಳು.

"ತಾಯಿ, ನಮ್ಮ ಮಾತೃಭೂಮಿ ನಮ್ಮನ್ನು ಪಡೆಯಿತು-

ದೇಶದ ಹಿರಿಮೆಗಾಗಿ, ರಕ್ಷಣೆಗಾಗಿ.'' ಮುದುಕಿ ತನ್ನ ವಸ್ತ್ರದ ಸೆರಗಿನಿಂದ ಕಣ್ಣೊರಸಿಕೊಂಡಳು.

'' ಮನೆಯೊಳಕ್ಕೆ ಬಾ ಮಗು. ಊಟಮಾಡುವೆಯಂತೆ.''

'' ನಾಸ್ತ್ಯಾ ಮಿಖೆಲೋವ್ನ ಬರಲಿಲ್ಲವೆ? ''

'' ಅವಳು ಬರಬೇಕಾದರೆ ಸಂಜೆಯಾಗುತ್ತದೆ. ಎಷ್ಟೋ ದಿನ ಅವಳಿಗೆ ಊಟಕ್ಕೆ ಸಮಯವೇ ಇರುವುದಿಲ್ಲ.

'' ಒಳ್ಳೆಯದಮ್ಮ, ಇಲ್ಲೊಂದು ಸೇಬಿನಗಿಡ ಹುಟ್ಟುಹಾಕಿ ಬರುತ್ತೇನೆ. ನನ್ನ ನೆನಪಿಗಾಗಿ ಅದೊಂದಿರಲಿ.''

೪

ತಾಯಿ ಹೊರಟುಹೋದ ಮೇಲೆ ಅಲೆಕ್ಸಿ ಗುಂಡಿ ತೋಡಿ, ಚರಂಡಿ ಹೊಡೆದು ತನ್ನ ಕೆಲಸವನ್ನು ಮುಗಿಸಿದನು. ಸಂಜೆಯ ಹೊತ್ತಿಗೆ ಪಾವೆಲನೊಡಗೂಡಿ ನಾಸ್ತ್ಯಾ ಬಂದಳು. ಅವರಿಬ್ಬರೂ ಅಲೆಕ್ಸಿ ಇದ್ದುದನ್ನು ಕಾಣದೆ ಅಂಗಳದಲ್ಲಿ ಮಗುಚಿಬಿದ್ದಿದ್ದ ಸ್ಲೆಜ್ ಗಾಡಿಯ ಮೇಲೆ ಕುಳಿತು ಮಾತಾಡುತ್ತಿದ್ದರು. ಆಗಿಂದಾಗ ನಾಸ್ತ್ಯಳ ನಗು ಕೇಳುತ್ತಿತ್ತು. ಸ್ವಲ್ಪ ಹೊತ್ತಾದ ಮೇಲೆ ಪಾವೆಲ್ ಹೊರಟು ಹೋದನು. ನಾಸ್ತ್ಯ ಮನೆಯೊಳಕ್ಕೆ ಹೋದಳು. ಸ್ಟ್ಯೇಪ ಅಲೆಕ್ಸಿಯನ್ನು ಊಟಕ್ಕೆ ಕರೆದನು. ಒಳಗೆ ನಾಸ್ತ್ಯ ಆತುರದಿಂದ ಊಟ ಮಾಡುತ್ತಿದ್ದಳು. ಅಲೆಕ್ಸಿ ಕಿಟಕಿಯ ಬಳಿ ನಿಂತು, ಹೊರಗೆ ಇಟ್ಟಿಗೆ ಸಾಗಿಸುತ್ತಿದ್ದುದನ್ನು ನೋಡಿ ಅವು ಎಲ್ಲಿಂದ ತಂದವೆಂದು ವಿಚಾರಿಸಿದನು.

'' ಎಲ್ಲಿಂದಲೇನು, ನಮ್ಮ ಸ್ವಂತ ಕಾರ್ಖಾನೆಯಿಂದ. ಅದು ಮತ್ತೆ ಕೆಲಸಮಾಡುವಂತೆ ಸರಿಪಡಿಸಿದ್ದೇವೆ.'' ನಾಸ್ತ್ಯ ಉತ್ತರ ಕೊಟ್ಟಳು.

'' ಓಹೋ, ಅದರಿಂದಲೇ ಕಟ್ಟಡದ ಕೆಲಸ ಅಷ್ಟು ಭರದಿಂದ ಸಾಗುತ್ತಿದೆ.'' ನಾಸ್ತ್ಯ ಕುಂಕಿದ ಮನಸ್ಸಿನಿಂದ, ಏನೋ ಸಂದೇಹದಿಂದ ಅವನ ಕಡೆ ನೋಡಿದಂತೆ ತೋರಿತು. ಅಲೆಕ್ಸಿಯ ಸಮಾಚಾರ, ಅವನ ಆರೋಗ್ಯ ಮುಂತಾದ ವಿಷಯವಾಗಿ ಮತ್ತೆ ಪ್ರಶ್ನೆಮಾಡಿದಳು.

“ ನೀವು ಅಲೆಕ್ಸಿಗೆ ಕಾಗದ ಬರೆಯುವುದಿಲ್ಲವಲ್ಲ; ಅದೇಕೆ ?”

“ ಸಾಧ್ಯವಾದಾಗಲೆಲ್ಲ ಬರೆಯುತ್ತೇನೆ.”

“ ಹೆಚ್ಚು ಬರೆದಂತೆ ಕಾಣುವುದಿಲ್ಲ ?”

“ ನಮ್ಮ ಕೆಲಸ ಎಷ್ಟಿದೆ, ನೀವೇ ನೋಡಿದಿರಲ್ಲ. ದಿನಕ್ಕೆ ಇಪ್ಪತ್ತುನಾಲ್ಕು ಘಂಟೆ ಸಾಲದು.”

ಅಲೆಕ್ಸಿಯ ಮನಸ್ಸಿನಲ್ಲಿ ಒಂದು ಬಗೆಯ ಉರಿಯೆದ್ದಿತು. ‘ಸ್ಲೆಜ್ ಗಾಡಿಯ ಮೇಲೆ ಕುಳಿತು ಪಾವೆಲನೊಡನೆ ಮಾತಾಡುವುದಕ್ಕೆ ಮಾತ್ರ ಸಮಯವಿದೆಯೇನೊ’ ಎಂದುಕೊಂಡು ಮತ್ತೆ ಗಡುಸು ಧ್ವನಿಯಿಂದ “ ನಿಮ್ಮಿಂದ ಬಹಳ ಉಪಚಾರವಾಯಿತು. ನಾನು ಇನ್ನು ಸ್ಟೇಷನ್ನಿಗೆ ಹೊರಡಬೇಕು” ಎಂದನು.

ನಾಸ್ಟ್ಯ ಮೊದಲಿಗಿಂತಲೂ ಮೃದುವಾದ ಧ್ವನಿಯಲ್ಲಿ “ ಇಷ್ಟು ಹೊತ್ತಾದ ಮೇಲೆ ಹೊರಡುವುದೇ ? ಹೊರಗೆ ನೋಡಿ, ಇನ್ನೇನು ಕತ್ತಲಾಗುವ ಸಮಯ. ರಾತ್ರಿ ಇಲ್ಲಿಯೇ ಇದ್ದುಬಿಡಿ ಎಂದಳು.”

ನಿಜವಾಗಿಯೂ ಸೂರ್ಯ ಮುಳುಗುವ ಹೊತ್ತಾಗಿ ಹುಲ್ಲುಗಾವಲಿನ ಬೆಳಸೆಲ್ಲ ಹೊಂಬಣ್ಣವನ್ನು ತಳೆದಿತ್ತು. ಮರದ ಕೊಂಬೆಗಳಲ್ಲಿ ಕಾಗೆಗಳು ತಮ್ಮ ಸಂಜೆಯ ಚರ್ಚೆಯನ್ನು ನಡೆಸುತ್ತಿದ್ದುವು. ಆದರೂ ಅಲೆಕ್ಸಿ ಚೀಲವನ್ನು ಕಟ್ಟಿ ಹೆಗಲಿಗೇರಿಸುತ್ತಿದ್ದಾಗ ಸ್ಟ್ಯೋಪ ಬಂದು ಅದನ್ನು ಕಿತ್ತುಕೊಂಡನು.

“ ನೀನು ಹೋಗಬೇಡ. ರಾತ್ರಿ ಇಲ್ಲೇ ಇದ್ದು ನನಗೆ ಅಣ್ಣನ ಕಥೆ ಎಲ್ಲಾ ಹೇಳಬೇಕು.”

“ ನೋಡಿದಿರಾ, ಮಗು ನಿಮ್ಮನ್ನು ಹೋಗಗೊಡುವುದಿಲ್ಲ. ದಯೆಮಾಡಿ ರಾತ್ರಿ ನಮ್ಮೊಡನೆಯೇ ನಿಂತುಬಿಡಿ. ಮಾತಾಡುವುದು ಬಹಳವಿದೆ. ನಾನು ನಿಮಗೆ ‘ಗುಡ್ ಬೈ’ ಹೇಳುವುದಿಲ್ಲ.” ನಾಸ್ಟ್ಯಳ ಧ್ವನಿ ಮತ್ತಷ್ಟು ಮೆದುವಾಯಿತು.

ನಾಸ್ಟ್ಯ ಮತ್ತೆ ತನ್ನ ಕೆಲಸಕ್ಕೆ ಹೊರಟಮೇಲೆ ಸ್ಟ್ಯೋಪ ಬಂದು ಅಲೆಕ್ಸಿಯನ್ನು ಅಪ್ಪಿಕೊಂಡು ಕುಳಿತನು. ಸ್ವಲ್ಪ ಹೊತ್ತು ಕಥೆ ಹೇಳಿದ ಮೇಲೆ ಅವರಿಬ್ಬರೂ ತೋಟಕ್ಕೆ ಹೋದರು. ನಸು

ಗತ್ತಲಿನಲ್ಲಿ ತೋಟವೆಲ್ಲಾ ಹಕ್ಕಿಗಳ ಹಾಡಿನಿಂದಲೂ ಕಾಗೆಗಳ ಕೂಗಿನಿಂದಲೂ ತುಂಬಿತ್ತು. ದೂರದಿಂದ ಎಲ್ಲೋ ಗಿಡಗಳ ಕೆಳಗೆ ಹರಿಯುತ್ತಿದ್ದ ತೊರೆಯ ಶಬ್ದ ಕೇಳಿತು. ಚಂದ್ರೋದಯದ ಸಮಯ. ತಂದೆಮಕ್ಕಳಿಬ್ಬರೂ ಸ್ವಲ್ಪಕಾಲ ಮಾತಿಲ್ಲದೆ ನಿಂತರು. ಅನಂತರ ಮಲಗುವ ಹೊತ್ತಾಯಿತೆಂದು ಒಳಗೆ ಬಂದರು. ನಡುಮನೆಯಲ್ಲಿಯೇ ಪರದೆಯ ಹಿಂದೆ ಅವನಿಗಾಗಿ ಹಾಸಿಗೆ ಹಾಸಿತ್ತು. ಅಲೆಕ್ಸಿಗೆ ಮಲಗಿದ ಕೂಡಲೆ ನಿದ್ದೆ ಬರಬೇಕು. ಆದರೆ ನಾಸ್ಟ್ಯ ಆಗತಾನೆ ಬಂದು ತನ್ನ ಕೋಣೆಗೆ ಹೋಗಿ ಮಲಗಿದ್ದು ಕೇಳಿಸಿತು. ಒಂದೆರಡು ನಿಮಿಷಗಳ ಮೇಲೆ ಯಾರೋ ಕಿಟಕಿಯನ್ನು ತಟ್ಟಿದ ಸದ್ದಾಯಿತು, ನಾಸ್ಟ್ಯ ಕಿಟಕಿಯನ್ನು ತೆರೆದಳು. ಪಾವೆಲನ ಧ್ವನಿ. ಅವರಿಬ್ಬರೂ ಸ್ವಲ್ಪಕಾಲ ಸಣ್ಣ ಧ್ವನಿಯಲ್ಲಿ ಮಾತಾಡಿದರು! ಅನಂತರ ನಾಸ್ಟ್ಯ ಕಿಟಕಿಯನ್ನು ಮುಚ್ಚಿದಳು. ಪಾವೆಲ್ ಹೊರಟು ಹೋದನು. ಅಲೆಕ್ಸಿಗೆ ಬರುತ್ತಿದ್ದ ನಿದ್ದೆ ಹಾರಿಹೋಯಿತು. ಹೃದಯವೆಲ್ಲಾ ಸೀಳಿದಂತಾಗಿ ಸುಮ್ಮನೆ ಕತ್ತಲು ಚಾವಣಿಯನ್ನು ದಿಟ್ಟಿಸಿ ನೋಡುತ್ತ ಮಲಗಿದ್ದನು. ಮನೆಯಲ್ಲಿ ಇಷ್ಟು ಭಯಂಕರವಾದ ನೋವು ಕಾದಿದ್ದರೆ ತಾನೇಕೆ ಬರಬೇಕಾಗಿತ್ತು! ಯುದ್ಧರಂಗದಲ್ಲಿ ಆ ಟ್ಯಾಂಕಿನ ಬೆಂಕಿ ತನ್ನನ್ನು ಪೂರ್ತಿಯಾಗಿ ಸುಟ್ಟು ಬೂದಿಮಾಡಬಾರದಾಗಿತ್ತೆ! ತನ್ನ ಹಿಂದಿನ ಸುಖ ಸಂತೋಷಗಳೆಲ್ಲ ಈ ಸ್ಥಿತಿಗೆ ಇಳಿದುವೆ? ಆ ಸುಖ ತನ್ನ ಪಾಲಿಗೆ ಬಂದಾಗ ಸಂದೇಹಕ್ಕೂ ಮತ್ಸರಕ್ಕೂ ಲೇಶವೂ ಅವಕಾಶವಿರಲಿಲ್ಲ. ನಾಸ್ಟ್ಯಳನ್ನು ಪ್ರೀತಿಸುವವರು ಅನೇಕರಿದ್ದರು. ಈ ಪಾವೆಲನೂ ಅವರಲ್ಲೊಬ್ಬ. ಆದರೂ ನಾಸ್ಟ್ಯ ತನ್ನನ್ನೇ ಒಲಿದು ಮದುವೆಯಾದಳು—ಅದು ಬಹಳಕಾಲ ಬೆಳೆದು ಬಂದ ಒಲುಮೆ. . . ಹೊರಟುಹೋಗಬೇಕು, ಅಲ್ಲಿಂದ ಓಡಿಹೋಗಬೇಕು. ಹಾಸಿಗೆಯಿಂದ ಎದ್ದು ನಿಂತನು. ನಾಸ್ಟ್ಯ ಇನ್ನೂ ಎಚ್ಚರವಾಗಿದ್ದು ಹೊರಳಾಡುತ್ತ ನಿಟ್ಟುಸಿರು ಬಿಟ್ಟು ನರಳುವಂತೆ ಕೇಳಿತು. ಅವಳೂ ಬಹಳ ಸಂಕಟದಲ್ಲಿರಬೇಕು. ಅಲೆಕ್ಸಿ ಯಾರಿಗೂ ತಿಳಿಯದಂತೆ ಹೊರಟುಹೋಗುವುದಕ್ಕಾಗುತ್ತಿರಲಿಲ್ಲ. ಹತ್ತಿರದಲ್ಲೇ ತಾಯಿಯೂ ಮಕ್ಕಳೂ ಉಸಿರಾಡುವುದು ಕೇಳುತ್ತಿತ್ತು ಮುಂದೆ ಅವರ ಜೀವನ

ಹೇಗೆ ಸಾಗುವುದೊ! ರಾತ್ರಿಯೆಲ್ಲಾ ಅಲೆಕ್ಸಿಗೆ ಮಕ್ಕಳ ಚಿಂತೆ; ಎದೆಯಲ್ಲಿ ಒಂದು ಬಗೆಯ ಮೂಕನೋವು.

ಕೊನೆಗೆ ರಾತ್ರಿ ಕಳೆದು ಮುಂಜಾನೆಯ ಬೆಳಕು ಸ್ವಲ್ಪಸ್ವಲ್ಪವಾಗಿ ಹರಡಿತು. ಹಕ್ಕಿಗಳು ಅರೆನಿದ್ದೆಯಲ್ಲೇ ಒಂದೊಂದು ಕೂಗು ಹಾಕುತ್ತಿದ್ದುವು. ಸ್ವಲ್ಪ ಹೊತ್ತಿನಲ್ಲಿಯೇ ದಿಗಂತದಲ್ಲಿ ಸೂರ್ಯನ ಸುವರ್ಣ ಬಿಂಬವೆದ್ದು ಕಿರಣಗಳು ಮನೆಯೊಳಗೆ ನುಗ್ಗಿ ಬಂದುವು. ಅಲೆಕ್ಸಿ ಎದ್ದು ಕುಳಿತನು.

ಮೊದಲು ತಾಯಿ, ಅನಂತರ ನಾಸ್ಟ್ಯ, ಎದ್ದು ಬಂದರು. ಅಲೆಕ್ಸಿ ಪರದೆಯಿಂದಾಚೆಗೆ ಬಂದು ಅವರಿಗೆ ಸುಪ್ರಭಾತ ಬಯಸಿದನು.

"ಇದೇನು ಇಷ್ಟು ಬೇಗ ಎದ್ದು ಬಿಟ್ಟಿರಿ? ಇನ್ನೂ ಸ್ವಲ್ಪಹೊತ್ತು ಮಲಗಿರಬಹುದಾಗಿತ್ತು" ಎಂದಳು ನಾಸ್ಟ್ಯ.

"ಪಾಪ, ತನ್ನ ಮನೆಯನ್ನು ಕಾಣದೆ ಇನ್ನೊಬ್ಬರ ಮನೆಯಲ್ಲಿ ಮಲಗಿದರೆ ನಿದ್ರೆ ಬರುತ್ತದೆಯೆ?" ಎಂದು ತಾಯಿ ನಿಟ್ಟುಸಿರುಬಿಟ್ಟಳು.

"ಗಾಡಿಯಲ್ಲಿ ನಿಮ್ಮನ್ನು ಸ್ಟೇಷನ್ನಿಗೆ ಕಳಿಸುತ್ತೇನೆ."

"ಏನೂ ಆವಶ್ಯಕವಿಲ್ಲ, ಈ ಕಷ್ಟ ಕಾಲದಲ್ಲಿ ಅದಕ್ಕೆಲ್ಲಾ ಸಮಯ ಕಳೆಯಬಾರದು."

"ಆದರೇನು, ನೀವು ಸ್ಟೇಷನ್ನಿನಿಂದ ಇಲ್ಲಿಗೆ ಹನ್ನೆರಡು ಮೈಲಿ ನಮಗಾಗಿ ನಡೆದು ಬರಲಿಲ್ಲವೆ? ಅಲ್ಲದೆ ಗಾಡಿ ಸ್ಟೇಷನ್ನಿಗೆ ಹೋಗಬೇಕಾದ ಕೆಲಸವೂ ಇದೆ. ರಾತ್ರಿ ಪಾವೆಲ್ ಬಂದಿದ್ದ. ಅವನು ಜಿಲ್ಲೆಯ ಕೇಂದ್ರಕ್ಕೆ ಹೋಗಬೇಕಾಗಿದೆ. ತುರ್ತಾದ ವರ್ತಮಾನ ಬಂದಿದೆ. ಸ್ವಲ್ಪ ಉಪಾಹಾರ ತೆಗೆದುಕೊಳ್ಳಿ. ಅಷ್ಟರಲ್ಲೇ ಅವನು ಗಾಡಿಯನ್ನು ತರುತ್ತಾನೆ."

ಇಬ್ಬರೂ ಮೌನವಾಗಿ ಕುಳಿತು ಬೇಗ ಬೇಗ ತಿಂಡಿ ತಿಂದರು. ತಾಯಿ ಅಲೆಕ್ಸಿಯ ಚೀಲಕ್ಕೆ ತಿಂಡಿಯ ಸಾಮಾನು ತುಂಬುತ್ತಿದ್ದಳು.

ಸ್ತ್ಯೋಪ ಎಚ್ಚತ್ತನು.

"ಸ್ತ್ಯೋಪ, ನಾನು ಹೋಗಿ ಬರಲೆ? ನನ್ನನ್ನು ಮರೆತುಬಿಡಬೇಡ. ಮುಂದೆ ಯಾವಾಗಲಾದರೂ ನಿನ್ನನ್ನು ನೋಡುವುದಕ್ಕೆ ಬರುತ್ತೇನೆ."

ಸ್ಟ್ಯೋಪನಿಗೆ ಬಹಳ ಬೇಜಾರಾಯಿತು. "ನೀನು ಯಾತಕ್ಕೆ ಹೊರಟು ಹೋಗುತ್ತೀಯೆ? ಏನು ಕೆಲಸ?"

"ಅಲ್ಲ ಮಗು, ಅವರಿಗೆ ಬೇರೆ ಕೆಲಸವೇ ಇಲ್ಲವೆ? ಇಲ್ಲೇ ಇದ್ದು ಬಿಡುವುದಕ್ಕಾಗುತ್ತೆಯೆ?" ಎಂದು ನಾಸ್ತ್ಯ ನಕ್ಕಳು.

"ಹೌದು, ಇಲ್ಲೇ ಇರಬೇಕು. ಅಣ್ಣ ಬರುವ ತನಕ ಇಲ್ಲೇ ಇರಬೇಕು."

"ಮಗು, ಅಣ್ಣ ಬರುವ ತನಕ ನೀನು ದೊಡ್ಡವನಾಗಿ ಬೆಳೆಯಬೇಕು, ತಿಳಿಯಿತೊ?" ಎಂದನು ಅಲೆಕ್ಸಿ.

"ನೀನೂ ಅಣ್ಣನ ಹಾಗೇ ಶೂರನಾಗಬೇಕು" ಎಂದು ತಾಯಿ ಹೇಳಿದಳು.

"ಇನ್ನು ಹೊರಡಲೆ? ಹೋಗಿಬರುತ್ತೇನೆ, ನಾಸ್ತ್ಯಾಸ್ಯ ಮಿಖೆಲೋವ್ನ, ನಿಮ್ಮಿಂದ ಬಹಳ ಉಪಚಾರವಾಯಿತು. ಬಹಳ ಆದರದಿಂದ ಕಂಡಿರಿ."

"ನಮಗೆ ನೀವು ಶುಭವರ್ತಮಾನ ತಂದಿರಿ. ಇಲ್ಲಿಗೆ ಬಂದದ್ದು ನಿಮಗೆ ಬಹಳ ತೊಂದರೆಯಾಗಿರಬೇಕು." ನಾಸ್ತ್ಯಳ ವಿಶಾಲವಾದ ದೃಷ್ಟಿ ಪೂರ್ಣವಾಗಿ ಅವನ ಮೇಲೆ ಬಿತ್ತು. ಅವಳ ನೀಲವಾದ ಕಣ್ಣುಗಳಲ್ಲಿ ಈಗ ಮರುಕವಾಗಲಿ, ಅಪರಿಚಿತನೆಂಬ ಭಾವವಾಗಲಿ ಇರಲಿಲ್ಲ; ದುಃಖವೂ ವಿಶ್ವಾಸವೂ ಕಂಡು ಬಂದವು.

ಮತ್ತೆ ಅಲೆಕ್ಸಿಯ ಹೃದಯದಲ್ಲಿ ಮಿತಿಯಿಲ್ಲದ ಆನಂದ, ಮಿತಿಯಿಲ್ಲದ ದುಃಖ—ಇವೆರಡರ ಹೋರಾಟದಲ್ಲಿ ಅವನ ತಲೆ ಸುತ್ತಿ ಬೀಳುವಂತಾಯಿತು. ನಟಾಷ ಮಲಗಿದ್ದ ಬಳಿಗೆ ಹೋಗಿ ನಿದ್ದೆಯಲ್ಲಿದ್ದ ಮಗುವಿಗೆ ನಿಧಾನವಾಗಿ ಮುತ್ತಿಟ್ಟು, ಒತ್ತಿಬಂದ ನೋವನ್ನು ತಡೆಯುತ್ತ ಸ್ಟ್ಯೋಪನ ಕಡೆ ನೋಡಿ ಬಿಗಿದ ಕಂಠದಿಂದ ಮಾತಾಡಿದನು.

"ಹೋಗಿ ಬರುತ್ತೇನೆ, ಸ್ಟ್ಯೋಪ" ಎಂದು ಅವನನ್ನೆತ್ತಿಕೊಂಡು ಎರಡು ವರ್ಷಗಳ ಹಿಂದೆ ಮಾಡಿದ್ದಂತೆ ಜೋಕಾಲಿ ಮಾಡಿದನು.

"ಆಲ್ಯೋಷ!" ನಾಸ್ತ್ಯ ನೋವಿನಿಂದ ಚೀರಿದಳು.

ಅಲೆಕ್ಸಿಗೆ ಕಾಲು ಕುಸಿಯುವಂತಾಗಿ ಸ್ಟ್ಯೋಪನನ್ನೇ ಅಪ್ಪಿ

ಕೊಂಡು ತಲೆ ತಗ್ಗಿಸಿನಿಂತನು. ನಾಸ್ತ್ಯ ಅವನ ಬಳಿಗೆ ಹಾರಿ, ಅವನ ಅಂಗಿಯನ್ನೂ ಮೆಡಲುಗಳನ್ನು ಹಾಕಿದ್ದ ಷರಟನ್ನೂ ಕಿತ್ತು, ಬೆತ್ತಲೆ ಎದೆಗೆ ತನ್ನ ಮುಖವನ್ನೊತ್ತಿ ಕಣ್ಣೀರಿನಿಂದ ಅವನನ್ನು ತೋಯಿಸಿದಳು. ಅಳು ಒಂದೇ ಸಮನೆ ಉಕ್ಕಿಬರುತ್ತಿತ್ತು.

"ಆಲ್ಯೋಷ, ಆಲ್ಯೋಷೆಂಕ! ನೀನು . . . ನೀನು . . . ಅಯ್ಯೋ ನನ್ನ ಮುದ್ದು ಆಲ್ಯೋಷೆಂಕ!" ಅವನ ಮುಖ, ಕೈಗಳು, ಎದೆ, ಎಲ್ಲ ವನ್ನೂ ಎಡೆಬಿಡದೆ ಮುತ್ತಿಟ್ಟಳು.

ಸ್ಟ್ಯೋಪನೂ ಕಣ್ಣೀರು ಹಾಕುತ್ತ ನಿಂತನು. ಇವರು ಅಳುವ ಶಬ್ದವನ್ನು ಕೇಳಿ ತಾಯಿ ಎಡವುತ್ತ ಓಡಿಬಂದು ವಿಷಯವೇನೂ ತಿಳಿ ಯದೆ ಬಾಗಿಲಿನಲ್ಲಿಯೇ ಭಯದಿಂದ ನಡುಗುತ್ತ ನಿಂತಳು. ಒಂದು ನಿಮಿಷವಾದ ಮೇಲೆ ಅರ್ಥಮಾಡಿಕೊಂಡು ಆಲ್ಯೋಷನ ಕಾಲನ್ನೇ ಅಪ್ಪಿಕೊಂಡು ನೆಲಕ್ಕೆ ಕುಸಿದಳು.

"ಮಗು, ಅಯ್ಯೋ ನನ್ನ ಮಗು, ಎಷ್ಟು ಸಂಕಟಪಟ್ಟೆಯಪ್ಪ! ಎಷ್ಟು ನರಳಿದೆಯೋ!"

ನಾಸ್ತ್ಯ ಮೆಲ್ಲಗೆ ಹೇಳಿದಳು "ಹೋಗಲಿ, ಈಗ ಒಳ್ಳೆಯ ದಾಯಿತು, ಒಳ್ಳೆಯದಾಯಿತು. ಆದರೂ ನೀನು . . . ನೀನು ನಮಗೆ ಹೇಳಲೇ ಇಲ್ಲ. ಹೊರಟು ಹೋಗುತ್ತಿದ್ದೆ! ನಮ್ಮನ್ನು ಮತ್ತೆ ಬಿಟ್ಟು ಹೋಗುತ್ತಿದ್ದೆ . . ."

"ನೀವು ಯಾರೂ ನನ್ನನ್ನು ಗುರುತಿಸದಿದ್ದರೇ ಒಳ್ಳೆಯದು ಎನ್ನಿಸಿತು.'' ಅಲೆಕ್ಸಿ ತಡೆದು ತಡೆದು ಹೇಳಿದನು.

ನಾಸ್ತ್ಯ ಅವನ ಮೈದಡವುತ್ತ ಮಿತಿಯಿಲ್ಲದ ಪ್ರೇಮದಿಂದ ಮೆಲು ದನಿಯಲ್ಲಿ, "ಮಕ್ಕಳನ್ನು ಹಾಗೆ ಆಡಿಸಬೇಕಾದರೆ ತಂದೆಗಲ್ಲದೆ ಇತರ ರಿಗೆ ಸಾಧ್ಯವೆ!" ಎಂದಳು.

"ನಾನಿಲ್ಲದಿದ್ದರೂ ಮಕ್ಕಳು ಹೇಗೋ ಬೆಳೆಯುತ್ತವೆ. ನೀನು . . . ಇನ್ನೂ ಪ್ರಾಯದವಳು. ನನ್ನಂಥ ವಿಕಾರರೂಪಿಯಿಂದ ನಿನ್ನ ಜೀವನದಲ್ಲಿ ಕತ್ತಲು ಕವಿಯಬೇಕೆ?''

ನಾಸ್ತ್ಯ ಅವನನ್ನು ಬಿಟ್ಟು ಒಂದು ಹೆಜ್ಜೆ ಸರಿದು ಕ್ಷಣಕಾಲ

ಮೌನವಾಗಿ ನಿಂತು ಅವನನ್ನು ದಿಟ್ಟಿಸಿ ನೋಡಿ ಸ್ವಲ್ಪ ನಿಷ್ಠುರವಾಗಿಯೇ ಹೇಳಿದಳು:

"ನಿನ್ನ ಮಾತು ಕೇಳಿ ಸಂತೋಷವಾಯಿತು, ಆಲ್ಯೋಷ. ಹಾಗಾದರೆ ನಾನು ಅಂಥ ಹೆಂಗಸೆಂದು ತಿಳಿದಿದ್ದೆ? ನಿನ್ನ ಮುಖದ ಸೌಂದರ್ಯಕ್ಕಾಗಿ ಮಾತ್ರ ನಿನ್ನನ್ನು ಪ್ರೀತಿಸಿದೆನೆಂದು ತಿಳಿದಿದ್ದೆ?"

"ಆ ಚಿತ್ರವನ್ನು ನೋಡು, ನಾಸ್ತ್ಯ. ನನ್ನ ಮುಖದ ಸೌಂದರ್ಯ ಅಲ್ಲಿ ಕಾಣುತ್ತದೆ"

"ಹೌದು. ಎಲ್ಲರೂ ಅದನ್ನು ನೋಡಿ ಸಂತೋಷಪಡುತ್ತಾರೆ. ಆದರೂ ನಿನ್ನಲ್ಲಿರುವ ಚೆಲುವು ಯಾವ ಚಿತ್ರದಲ್ಲೂ ಬರಲಾರದು." ನಾಸ್ತ್ಯ ಮತ್ತೆ ಬಂದು ಅವನನ್ನಪ್ಪಿಕೊಂಡಳು. "ಅಯ್ಯೋ, ನಿನ್ನ ಷರಟನ್ನು ಹರಿದುಬಿಟ್ಟೆನಲ್ಲ, ಆಲ್ಯೋಷ! ತಾಳು, ಈಗಲೇ ಎರಡು ಹೊಲಿಗೆ ಹಾಕಿ ಕೊಡುತ್ತೇನೆ."

ತಾಯಿಯ ದುಃಖ ಮತ್ತೆ ಹೊರಹೊಮ್ಮಿತು. "ಮಗು, ಮಗು, ಆ ಪಿಶಾಚಿಗಳು ನಿನ್ನ ಏನು ಮಾಡಿಬಿಟ್ಟರಪ್ಪ! . . . ನಿನ್ನೆ ನೀನು ಬಂದಾಗ ಹಿಂದುಗಡೆಯಿಂದ ನೋಡಿ ಅಂದುಕೊಂಡೆ, ನನ್ನ ಆಲ್ಯೋಷ ಇದ್ದ ಹಾಗೇ ಇದೆ ಅಂತ. ಆದರೂ ಹೊಳೆಯಲಿಲ್ಲ. . . ."

"ನಿನ್ನೆ ಊಟಮಾಡುತ್ತಿದ್ದಾಗ . . . ರಾತ್ರಿಯೆಲ್ಲಾ ನಿದ್ರೆ ಬರಲಿಲ್ಲ. ಬೆಳಗಿನವರೆಗೂ ಕಣ್ಣು ಮುಚ್ಚುವುದಕ್ಕೇ ಆಗಲಿಲ್ಲ"— ನಾಸ್ತ್ಯಳ ಧ್ವನಿಯಲ್ಲಿ ಆನಂದವೂ ಪ್ರೇಮವೂ ತುಂಬಿ ತುಳುಕುತ್ತಿದ್ದುವು.

ಸ್ಟ್ಯೋಪನಿಗೆ ಇದೆಲ್ಲಾ ಬೇಸರವಾಯಿತು. "ಅಣ್ಣ, ಅಣ್ಣ, ನೀನು ಎಷ್ಟು ಟ್ಯಾಂಕ್ ಬಲಿಹಾಕಿದೆ ಹೇಳಣ್ಣ."

ಮೈದಾನದ ಮೇಲೆ ಆಗಲೇ ಬಿಸಿಲು ಹರಡಿತ್ತು. ಯಾರೋ ಬಂದು ಕಿಟಕಿಯನ್ನು ತಟ್ಟಿದರು. ನಾಸ್ತ್ಯ ಮತ್ತೆ ತನ್ನ ಕೆಲಸಕ್ಕೆ ಹೋಗಬೇಕು.

---

# ಬ್ಲಾಂಡಿಂಗ್ಸ್ ಕಟ್ಟಿದ ಬಂಗಲೆ

ಬೆಟ್ಟದ ಮಡಿಲನ್ನು ಅಪ್ಪಿದಂತಿದ್ದ ಮುದ್ದಾದ ಆ ಹಳೆಯ ಮನೆಯ ಸೂರು ಆಕಾಶದ ಹಿನ್ನೆಲೆಯಲ್ಲಿ ಸ್ವಲ್ಪ ಅಲುಗಾಡುತ್ತಿತ್ತು. ಅದರ ಹೊಗೆಕೊಳವೆ ದಕ್ಷಿಣದ ಕಡೆಗೆ ಸ್ವಲ್ಪ ಬಾಗಿತ್ತು. ಮನೆಯ ಮುಂದೆ ಒಂದು ದೊಡ್ಡ ಲೈಲಕ್ ಮರ—ಅಷ್ಟು ದೊಡ್ಡ ಲೈಲಕ್ ಮರವನ್ನು ಬ್ಲಾಂಡಿಂಗ್ಸ್ ದಂಪತಿಗಳು ನೋಡಿಯೇ ಇರಲಿಲ್ಲ. ಮನೆ ಕಟ್ಟಿದ ಹೊಸದರಲ್ಲಿ—ಸುಮಾರು ೧೭೦ ವರ್ಷದ ಕೆಳಗೆ—ಅದನ್ನು ಸಸಿಯಾಗಿ ನೆಟ್ಟದ್ದಿರಬೇಕು.

ಆ ಸ್ವತ್ತನ್ನು ಮಾರಾಟಮಾಡಿಸಲು ಬಂದಿದ್ದ ಏಜೆಂಟನು ಬೀಗದ ಕೈಗೆ ಬದಲಾಗಿ ತನ್ನ ಚೂರಿಯನ್ನೇ ಉಪಯೋಗಿಸಿ ಬಾಗಿಲು ತೆಗೆದನು. ಮನೆಯ ಒಳಗಿನಿಂದ ನೋಡಿದರೂ ಸುತ್ತಿನ ದೃಶ್ಯ ಬಲು ಸುಂದರವಾದದ್ದು. ಮುಂದಿನ ಪ್ರದೇಶ ಒಂದು ಮೈಲಿಯ ಆಚೆ ಇದ್ದ ನದಿಯವರೆಗೂ ಇಳಿಯುತ್ತ ಹೋಗಿ ಅಲ್ಲಿಂದಾಚೆಗೆ ಮತ್ತೆ ಏರಿ ಅಲೆಯುಲೆಯಾಗಿ ದೂರದಲ್ಲಿ ಕಾಣುತ್ತಿದ್ದ ಬೆಟ್ಟಗಳನ್ನು ಸೇರಿಹೋಗಿತ್ತು. "ಮೋಡವಿಲ್ಲದೆ ಶುಭ್ರವಾದ ದಿನವಾದರೆ ಇಲ್ಲಿಂದ ಕ್ಯಾಟ್ಸ್ಕಿಲ್ ಪರ್ವತ ಸಹ ಕಾಣುತ್ತದೆ" ಎಂದ, ಮನೆಯ ಏಜೆಂಟ್.

ಬ್ಲಾಂಡಿಂಗ್ಸ್ ದಂಪತಿಗಳು "ಹೂಂ" ಎಂದು ತಲೆ ಹಾಕಿದ ರೀತಿಯಿಂದಲೇ ಏಜೆಂಟನು ಬುಟ್ಟಿಗೆ ಮೀನು ಬಿತ್ತೆಂದು ಅರ್ಥಮಾಡಿಕೊಂಡು, ಮನಸ್ಸಿನಲ್ಲೇ ೧೦,೭೭೫ ಡಾಲರಿನ ಮೇಲೆ ಶೇಕಡಾ ೫ ರಂತೆ ದಳ್ಳಾಳಿ ಎಷ್ಟಾಗುತ್ತದೆಂದು ಗುಣಿಸಿಕೊಂಡನು. ಒಂದು ಕಡೆ ಹೊಗೆಯಿಂದ ಕಪ್ಪಾಗಿ ಉರುಟಿಕೊಂಡು ಬಿದ್ದಿದ್ದ ಕಲ್ಲುಗಳ ಗುಡ್ಡೆಯೊಂದನ್ನು ತೋರಿಸಿ, "ಅಲ್ಲಿ ನೀವು ಸ್ವಲ್ಪ ಸಿಮೆಂಟ್ ಕೆಲಸ ಮಾಡಿಸಬೇಕಾಗುತ್ತದೆ" ಎಂದನು. ಸುಮಾರು ಒಂದು ಶತಮಾನದ ಹಿಂದೆ ಅದು ಅಡಿಗೆಮನೆಯ ಒಲೆಯಾಗಿದ್ದಿರಬೇಕು. ಮಿಸೆಸ್ ಬ್ಲಾಂಡಿಂಗ್ಸ್ ಆ ಕಡೆ ತಿರುಗಿನೋಡಿದಳು. ಒಲೆಯ ಸದ್ಯಸ್ಥಿತಿಯನ್ನು

ಕಟ್ಟಿಕೊಂಡೇನು! ಮುಂದೆ ಅದನ್ನೆಲ್ಲಾ ಸರಿಪಡಿಸಿದ ಮೇಲೆ ಅಲ್ಲಿ ಕಾಣುವುದೆಂದರೆ ಈ ಕಲ್ಲುಗುಡ್ಡೆಯಲ್ಲ; ವಿದ್ಯುಚ್ಛಕ್ತಿಯ ಶಾಖದಿಂದ ಕೆಂಪಾದ ಕಬ್ಬಿಣದ ಒಲೆ, ಅದರ ಮೇಲೆ ಮಿರುಗುತ್ತಿರುವ ಪಾತ್ರೆಗಳಿಂದ ಸುವಾಸನೆಯನ್ನು ಬೀರುವ ತಿಂಡಿತೀರ್ಥಗಳು—ಇದನ್ನೆಲಾ. ಆಕೆ ಮನಸ್ಸಿನಲ್ಲೇ ಕಲ್ಪಿಸಿಕೊಂಡು ಆನಂದಪಟ್ಟಳು.

ಬ್ಲಾಂಡಿಂಗ್ಸ್ ಬೇರೊಂದು ಕಡೆ ತಿರುಗಿದ. ಅವನ ಸಂತೋಷ ಮೌನದಲ್ಲೇ ಅಡಗದೆ ಮಾತಿನಲ್ಲೂ ವ್ಯಕ್ತವಾಯಿತು.

“ಚೆನ್ನಾಗಿದೆ, ಚೆನ್ನಾಗಿದೆ. . . . ಅಲ್ಲಿ ನೆಲ ಸರಿಮಾಡಿಸಿದರೆ ನಾಲ್ಕು ಜನ ಸ್ನೇಹಿತರು ಕುಳಿತು ಸಂಜೆ ಬೀರ್ ಕುಡಿಯುವುದಕ್ಕೆ ಸೊಗಸಾದ ಸ್ಥಳ.” ಯಾವುದೋ ಘನವಾದ ತತ್ತ್ವಾರ್ಥವನ್ನು ಕೇಳಿದವನಂತೆ ಏಜೆಂಟ್ ತಲೆದೂಗಿದ. ಮನಸ್ಸಿನಲ್ಲಿ ೧೧,೫೦೦ ಡಾಲರಿನ ಮೇಲೆ ಶೇಕಡಾ ೫ ರಂತೆ ಎಷ್ಟಾಗುತ್ತದೆಂದು ಲೆಕ್ಕಹಾಕುತ್ತಾ “ಅಲ್ಲವೆ, ಸಿಕ್ಕಬೇಕಲ್ಲ ಇಂಥ ಸ್ಥಳ! ಬನ್ನಿ, ನಿಮ್ಮ ಹಣ್ಣಿನ ತೋಟ ಹತ್ತಿರದಲ್ಲೇ ಇದೆ; ನೋಡಿಕೊಂಡು ಬರೋಣ. ಅದರ ವಿಷಯ ಒಂದು ಸ್ವಾರಸ್ಯವಾದ ಕಥೆಯಿದೆ” ಎಂದು ಕರೆದುಕೊಂಡು ಹೋದ.

**ತಮ್ಮ ತೋಟ**! ಆ ಮಾತನ್ನು ಕೇಳಿ ಬ್ಲಾಂಡಿಂಗ್ಸ್ ದಂಪತಿಗಳು ಹರ್ಷದಿಂದ ಉನ್ಮತ್ತರಾದರು.

ಇದೇ ಆ ಹಳೆಯ ಮನೆಯನ್ನೂ ಸುತ್ತಿನ ಜಮೀನನ್ನೂ ಬ್ಲಾಂಡಿಂಗ್ಸರು ಕೊಂಡ ಕಥೆ. ಮನೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಸರಿಯಾಗಿ ಕಟ್ಟಿಸುವ ಕೆಲಸ ಪ್ರಾರಂಭಿಸಬೇಕಾದರೆ ಇನ್ನೂ ಒಂದು ವರ್ಷ ಕಳೆಯಬೇಕು. ಮರ ಮುಟ್ಟುಗಳ ಬೆಲೆ ಹದಕ್ಕೆ ಬರುವವರೆಗೆ. ಆ ಕೆಲಸಕ್ಕೆ ಕೈ ಹಾಕುವಂಥ ಹುಚ್ಚನಲ್ಲ, ನಾನು” ಎಂದು ಬ್ಲಾಂಡಿಂಗ್ಸ್ ಸ್ಪಷ್ಟವಾಗಿ ಹೇಳಿದ್ದನು. ಆದರೆ ಆ ಹದವೇನು, ಬೆಲೆ ಸರಿಯಾಗಿರುವ ಕಾಲ ಯಾವುದು ಎಂಬುದೇನೂ ಆತನಿಗೆ ಗೊತ್ತಿರಲಿಲ್ಲ—ಗೊತ್ತಿಲ್ಲವೆನ್ನುವುದೂ ಗೊತ್ತಿರಲಿಲ್ಲ.

೧೧,೫೦೦ ಡಾಲರಿಗೆ ಆ ಮನೆಯನ್ನು ಅವರ ತಲೆಗೆ ಕಟ್ಟುವುದಕ್ಕೆ ಏಜೆಂಟ್ ಸರಿಯಾದ ಪೀಠಿಕೆ ಹಾಕಿದ್ದನು. “ಆಸ್ತಿಯ ಈಗಿನ ಬೆಲೆ

ಹೆಚ್ಚು ಕಡಿಮೆ ೧೦,೦೦೦ ಕ್ಕೆ ನಿಲ್ಲುತ್ತದೆ ಎಂದಿಟ್ಟುಕೊಳ್ಳೋಣ. ಮನೆಯನ್ನು ದೊಡ್ಡದು ಮಾಡಿಸುವುದು, ರಿಪೇರಿ ಕೆಲಸ ವಗೈರೆ—ಇದಕ್ಕೆಲ್ಲಾ ಇನ್ನೊಂದು ೧೦,೦೦೦ ಕಟ್ಟಿಕೊಳ್ಳಿ. ಒಟ್ಟು ೨೦,೦೦೦ ಖರ್ಚಾಯಿತು. ಆದರೆ ಒಂದು ಜೀವಮಾನದಲ್ಲಿ ಇಂಥ ಆಸ್ತಿ ಸಂಪಾದನೆ ಮಾಡುವುದಕ್ಕಾದೀತೆ? ಕಳ್ಳನಿಗೆ ಕೊಟ್ಟರೂ ನಿಮ್ಮ ಹಣ ವಾಪಸು ಬರುತ್ತೆ. ಅಲ್ಲದೆ ಮುಂದಿನ ಈ ದೃಶ್ಯ ನೋಡಿ, ಈ ಚೆಲುವಿಗೆ ಬೆಲೆ ಕಟ್ಟುವುದು ಸಾಧ್ಯವೆ?" ಇತ್ಯಾದಿ, ಇತ್ಯಾದಿ. ಏಜೆಂಟನಿಗೆ ಕವಿಯ ಆವೇಶ ಬಂದಂತೆ ತೋರಿತು. ಅವನ ವರ್ಣನೆ ಕೇಳಿ ಬ್ಲಾಂಡಿಂಗ್ಸನ ಬುದ್ಧಿ ಮಂಕಾಯಿತು.

ಕೆಲವು ದಿನಗಳಾದ ಮೇಲೆ ಅವನ ಹೆಂಡತಿಯ ಬಾಯಿಂದ ಒಡಕುಮಾತು ಹೊರಟಿತು.

"ಆ ಹಳೆಯ ಮನೆಯನ್ನು ಹಾಗೇ ರಿಪೇರಿ ಮಾಡಿಸುವುದಕ್ಕೆ ಹೋದರೆ....ಅದು ಸಾಧ್ಯ ಎನ್ನುತ್ತೀರ?"

ಬ್ಲಾಂಡಿಂಗ್ಸ್ ಸಿಡಿಲು ಹೊಡೆದವನಂತೆ ಹಾರಿ ಬಿದ್ದ. ಹೆಂಡತಿ ಅವನ ನೊಂದ ಮನಸ್ಸಿಗೆ ಲೇಪ ಹಾಕಿದಳು. "ನಾನು ಹೇಳಿದ್ದಕ್ಕೆ ಇನ್ನೇನೂ ಅರ್ಥ ಮಾಡಬೇಡಿ. ಯಾರಾದರೂ ಸ್ವಲ್ಪ ಅನುಭವಸ್ಥರನ್ನು ಕೇಳಿದರೆ ಒಳ್ಳೆಯದಲ್ಲವೆ ಅಂತ ತೋರಿತು, ಅಷ್ಟೆ."

"ಆ ವಿವೇಕ ನನಗೇನು ಹೊಳೆದಿರಲಿಲ್ಲವೊ!" ಎಂದುಕೊಂಡು ಬ್ಲಾಂಡಿಂಗ್ಸ್ ತನ್ನ ವಕೀಲ ಸ್ನೇಹಿತ ಬಿಲ್ ಕೋಲನ ಬಳಿಗೆ ಹೋಗಿ "ಯಾರಾದರೂ ಒಬ್ಬ ಎಂಜಿನಿಯರನ ಸಲಹೆ ಕೇಳಬೇಕಯ್ಯಾ. ಬರಿಯ ಪುಸ್ತಕದ ಬದನೇಕಾಯಿ ಹೇಳುವವನಾದರೆ ಪ್ರಯೋಜನವಿಲ್ಲ; ಮನೆ ಕಟ್ಟಿ ಅನುಭವವಿರುವವನಾಗಬೇಕು" ಎಂದನು. ಎಂಜಿನಿಯರನ್ನು ಕರೆದುಕೊಂಡುಹೋಗಿ ಮನೆ ತೋರಿಸಿದ್ದಾಯಿತು. ಆತ ಟೇಪು, ಮುಕ್ಕಾಲು ಮುಂತಾದ್ದೇನನ್ನೂ ತಂದಿರಲಿಲ್ಲ; ಮನೆಯ ನಕ್ಷೆ ಬೇಕೆಂದು ಕೇಳಲೂ ಇಲ್ಲ. ಅರ್ಧ ಫರ್ಲಾಂಗು ದೂರದಿಂದಲೇ ಅದನ್ನು ದಿಟ್ಟಿಸಿ ನೋಡಿ ಆಮೇಲೆ ಹತ್ತಿರ ಹೋಗಿ ಗೋಡೆಯನ್ನು ಒಂದು ಸಾರಿ ಒದೆದ. ಏನೋ ಕಳಚಿಕೊಂಡು ಬಿತ್ತು. ಬ್ಲಾಂಡಿಂಗ್ಸನಿಗೆ

ತನಗೇ ಒದೆ ಬಿದ್ದಷ್ಟು ಸಂಕಟವಾಯಿತು. ಎಂಜಿನಿಯರು ಅವನ ಕಡೆ ತಿರುಗಿ "ಮನೆಯನ್ನೆಲ್ಲಾ ನೆಲಸಮ ಕೆಡವಿಸಿಬಿಡಿ" ಎಂದುಬಿಟ್ಟ.

ಬ್ಲಾಂಡಿಂಗ್ಸ್ ಮನೆಗೆ ಬಂದ ಮೇಲೆ ವ್ಹಿಸ್ಕಿ ಕುಡಿಯುತ್ತಾ ತನ್ನ ಅಸಮಾಧಾನವನ್ನು ಸೂಚಿಸಿದ.

"ಆ ಕತ್ತೆಗೆ ಏನು ತಿಳಿಯುತ್ತೆ! ನೆಲಸಮ ಕೆಡವಿಸಬೇಕಂತೆ! ಎಷ್ಟು ಹಿಂದಿನಿಂದ ಬಂದ ಮನೆ!"

ಹೆಂಡತಿ ಹುಬ್ಬು ಗಂಟಿಕ್ಕಿದಳು. "ಮನಸ್ಸಿಗೇನಾದರೂ ಕಿಂಕೃತಿಯಾದರೆ ಗ್ಯಾಲನ್‌ಗಟ್ಟಲೆ ವ್ಹಿಸ್ಕಿ ಹೀರಬೇಕೆ!"

ಬ್ಲಾಂಡಿಂಗ್ಸನ ಕೋಪಕ್ಕೆ ಕಾರಣವೇನೋ ಸಾಕಾದಷ್ಟಿತ್ತು. ಆ ಎಂಜಿನಿಯರು ಮನೆಯನ್ನು ನೋಡಿ ಸಲಹೆ ಕೊಟ್ಟದ್ದಕ್ಕೆ ೫೦ ಡಾಲರು ಬಿಲ್ ಕಳುಹಿಸಿದ್ದ. ೧೧,೫೫೦ ಡಾಲರ್ ತೆತ್ತು ಕೊಂಡ ಮನೆ ಉರುಳಿಸುವುದಕ್ಕೆ ಮಾತ್ರ ಯೋಗ್ಯವೆಂದು ಸ್ಪಷ್ಟವಾಯಿತು. ಆ ಸಲಹೆ ಕೊಟ್ಟದ್ದಕ್ಕೆ ೫೦ ಡಾಲರಿನ ದಂಡ ಬೇರೆ!

ಇದಾದ ಮೇಲೆ ಮನೆ ಕೆಡವಿಸುವುದರಲ್ಲಿ ನಿಪುಣನೆಂದು ಪ್ರಸಿದ್ಧಿ ಪಡೆದಿದ್ದ ಪೆರ್ಲಾಸ್ಕಿಯ ಸಲಹೆ ಕೇಳಬೇಕಾಯಿತು. ಬ್ಲಾಂಡಿಂಗ್ಸನ ಮನಸ್ಸಿನಲ್ಲಿ, ಮನೆಯನ್ನು ಕೆಡವಿದರೂ ಅದರ ಹಳೆಯ ಸಾಮಾನುಗಳನ್ನು ಮಾರಿ ಒಂದೆರಡುಸಾವಿರ ಡಾಲರನ್ನಾದರೂ ದಕ್ಕಿಸಿಕೊಳ್ಳಬಹುದೇನೋ ಎಂಬ ಆಸೆ. ಪೆರ್ಲಾಸ್ಕಿ ಕಾಲು ಘಂಟೆ ಲೆಕ್ಕಹಾಕಿ ನೋಡಿದ.

"೮೫೦ ಡಾಲರಿನೊಳಗೆ ಕೆಲಸ ಮುಗಿಯಬಹುದು. ಎಲ್ಲಾ ಕೆಡವಿ ಅಲ್ಲಿ ಮನೆ ಇರಲೇ ಇಲ್ಲ ಅನ್ನುವಹಾಗೆ ಮಾಡಿಕೊಟ್ಟುಬಿಡುತ್ತೇನೆ."

ಬ್ಲಾಂಡಿಂಗ್ಸನಿಗೆ ಹುಚ್ಚುಹಿಡಿದ ಹಾಗಾಯಿತು. "ಏನು, ೮೫೦ ಡಾಲರೆ?"

"ನನಗೇನೋ ಸ್ವಲ್ಪ ನಷ್ಟವಾಗುತ್ತೆ. ಆದರೂ ಒಂದೆರಡು ಜಂತಿ ಉಪಯೋಗಕ್ಕೆ ಬಂದರೂ ಬರಬಹುದು—ಪರವಾಯಿಲ್ಲ. ೮೫೦ ಕ್ಕೆ ಮಾಡಿಕೊಡುತ್ತೇನೆ."

ಬ್ಲಾಂಡಿಂಗ್ಸ್ ತನ್ನ ಹೆಂಡತಿಯೊಡನೆ ಈ ವಿಷಯ ಮಾತಾಡಿದಾಗ ಆಕೆ "ನಿಮ್ಮ ಬಾಯಲ್ಲಿ ಹೊರಡುವುದು ಯಾವಾಗಲೂ ಕೆಟ್ಟ ಭಾಷೆಯೇ; ಸುಮ್ಮನಿರಿ. ನಿಮ್ಮ ಮಾತು ಕೇಳಿ ಮಕ್ಕಳೂ ಅದನ್ನೇ ಕಲಿತುಕೊಂಡಾವು!" ಎಂದು ಎಚ್ಚರಿಕೆ ಕೊಡಬೇಕಾಯಿತು.

ಬ್ಲಾಂಡಿಂಗ್ಸನ ಸ್ನೇಹಿತ ಸಿಮ್ಸ್ ಎಂಬವನು ಗೃಹಶಿಲ್ಪಿಯಾಗಿದ್ದ. ಅವನ ಅಭಿಪ್ರಾಯವನ್ನು ಕೇಳಿದಾಗ ಆತ "ಆ ಮನೆಯನ್ನೇನೋ ರಿಪೇರಿ ಮಾಡಿಸಬಹುದು; ಅಸಾಧ್ಯವೇನೂ ಅಲ್ಲ. ಆದರೆ ಹೊಸ ಮನೆ ಕಟ್ಟಿದ್ದಕ್ಕಿಂತ ಹೆಚ್ಚು ಖರ್ಚು ತಗಲುತ್ತದೆ. ಅಲ್ಲದೆ ನಿಮ್ಮ ಮನಸ್ಸಿಗೆ ಒಪ್ಪುವಂಥ ಮನೆಯೂ ಆಗುವುದಿಲ್ಲ. ನಿರ್ದಾಕ್ಷಿಣ್ಯವಾಗಿ ನನಗೆ ತೋರಿದ್ದು ಹೇಳಿಬಿಡಲೋ?—ಆ ಮನೆಯನ್ನು ಉರುಳಿಸಿ ಹೊಸದಾಗಿ ಕಟ್ಟಿಬಿಡಿ!" ಎಂದುಬಿಟ್ಟ.

ಈ ವೇಳೆಗೆ ಬ್ಲಾಂಡಿಂಗ್ಸನೂ ಅವನ ಹೆಂಡತಿಯೂ "ನಾವೂ ಅದೇ ಯೋಚನೆ ಮಾಡಿದ್ದೆವು. ಆ ಮುರಕಲು ಮನೆಗೆ ವೃಥಾ ತೇಪೆ ಹಾಕಿದರೆ ಏನು ಪ್ರಯೋಜನ?" ಎನ್ನುವ ಸ್ಥಿತಿಗೆ ಬಂದಿದ್ದರು.

೨೦,೦೦೦ ಡಾಲರಿನ ಅಂದಾಜಿಗೆ ಸಿದ್ಧರಾಗಿ ಅವರು ಈ ಕೆಲಸಕ್ಕೆ ಕೈ ಹಾಕಿದ್ದರು. "ಕೊಳ್ಳುವುದಕ್ಕೆ ೧೦,೦೦೦, ರಿಪೇರಿ ಕೆಲಸಕ್ಕೆ ೧೦,೦೦೦ ಎಂದು ಏಜೆಂಟ್ ಹೇಳಿದಾಗ ಆ ಲೆಕ್ಕಾಚಾರ ಸರಿಯಾಗಿಯೇ ಕಂಡಿತು. ಆದರೆ ಈಗ ಕೆಲಸ ೨೦,೦೦೦ ದಲ್ಲಿ ಮುಗಿಯುವ ಹಾಗೆ ತೋರಲಿಲ್ಲ. "ಆದರೇನು, ನಮ್ಮ ಶಕ್ತಿಗೆ ಮೀರಿದ ವಿಷಯವೇನೂ ಅಲ್ಲ. ಒಂದು ಸಾವಿರ ಹೆಚ್ಚಾದರೆ ನಾವೇನು ಮುಳುಗಿ ಹೋಗುತ್ತೇವೆಯೆ?" ಎಂದು ಸಮಾಧಾನ ತಂದುಕೊಂಡರು.

ಬೆಟ್ಟದ ತಪ್ಪಲಿನಲ್ಲಿಯೇ ಒಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಬ್ಲಾಂಡಿಂಗ್ಸ್ ಅಲ್ಲಿಯೇ ವಾಸಮಾಡಲಾರಂಭಿಸಿದ. ಪ್ರತಿ ಶನಿವಾರವೂ ಅಲ್ಲಿ ಸಿಮ್ಸನೊಡನೆ ಸಮಾಲೋಚನೆ ನಡೆಯುತ್ತಿತ್ತು. ಮಾತುಕಥೆಗಳು ತೃಪ್ತಿಕರವಾಗಿಯೇ ಮುಂದುವರೆದವು. ಬ್ಲಾಂಡಿಂಗ್ಸನಿಗೆ ಒಂದೇ ಒಂದು ಅಸಮಾಧಾನ—ಮನೆಯ ನಕ್ಷೆ ತಯಾರಿಸುವಾಗ ಸಿಮ್ಸ್ ಎಲ್ಲವನ್ನೂ ಕಿಷ್ಕಿಂಧೆ ಮಾಡುವಹಾಗೆ

ಕಂಡಿತು. ಪಟ್ಟಣವನ್ನು ಬಿಟ್ಟು ಅಷ್ಟು ದೂರ ಹಳ್ಳಿಗಾಡಿಗೆ ಬಂದರೆ ಅಲ್ಲಾದರೂ ಕೈಕಾಲು ಆಡಿಸುವಷ್ಟು ಜಾಗ ಬೇಡವೆ? ಈ ಆಕ್ಷೇಪಣೆಗೆ ಸಿಮ್ಸ್ ಉತ್ತರವನ್ನು ಸಿದ್ಧವಾಗಿಟ್ಟಿದ್ದ. "ನೀನು ಹೇಳುವುದು ಸರಿಯಯ್ಯಾ. ಆದರೆ ಮನೆಯ ಸಲೆಯಡಿ ಎಷ್ಟಾಗಬಹುದು ಎನ್ನುವುದರ ಮೇಲೆ ದೃಷ್ಟಿಯಿರಬೇಕೋ ಬೇಡವೋ? ಈಗ ನಾವು ಏರ್ಪಾಡು ಮಾಡಿರುವಂತೆ ಕಟ್ಟಿದರೆ ಸಲೆ ಅಡಿ ಒಂದಕ್ಕೆ ೫೦ ಸೆಂಟು ಖರ್ಚಾಗುತ್ತೆ.''

ಮನೆಯ ಒಟ್ಟು ಖರ್ಚನ್ನು ಬ್ಲಾಂಡಿಂಗ್ಸ್ ಲೆಕ್ಕಾಚಾರಮಾಡಿ ನೋಡಿರಲಿಲ್ಲವಾದ್ದರಿಂದ ಅವನಿಗೆ ೫೦ ಸೆಂಟು ಅಷ್ಟೇನೂ ಅಗಾಧವಾಗಿ ತೋರಲಿಲ್ಲ. ''ನಾಲ್ಕು ಸಲೆ ಅಡಿ ಹೆಚ್ಚಾದರೆ ಇವನ ಗಂಟೇನು ಹೋಯಿತು! ನಮ್ಮ ಮೇಲಿನ ಅಭಿಮಾನದಿಂದಲೇ ಹೇಳುತ್ತಾನೆ, ನಿಜ. ಆದರೂ ಇವನ ಗೊಣಗಾಟ ಏಕೋ ಅತಿಯಾಯಿತು'' ಎಂದುಕೊಂಡ.

"ಈ ಮನೆ ೧೮,೦೦೦ ಕ್ಕೆ ಮುಗಿದರೆ ಬಿಟ್ಟ ಆದ ಹಾಗೆ'' ಎಂದು ಸಿಮ್ಸ್ ನಿಟ್ಟುಸಿರುಬಿಟ್ಟ.

ಸ್ವಲ್ಪಕಾಲ ಕಳೆದ ಮೇಲೆ ಬ್ಲಾಂಡಿಂಗ್ಸನಿಗೆ ಇನ್ನೊಂದು ವಿಷಯ ಹೊಳೆಯಿತು. ಜವಾನರಿರುವುದಕ್ಕೆ ಸ್ಥಳ ಏರ್ಪಾಡು ಮಾಡಿಯೇ ಇರಲಿಲ್ಲ. ಅದು ಅವಶ್ಯಕವಷ್ಟೆ. ಅಡಿಗೆ ಮನೆಗೆ ಸೇರಿದಂತೆ ಒಂದು ಸಣ್ಣ ಕೊಠಡಿ, ಮಲಗುವ ಮನೆ, ಬಚ್ಚಲು ಮನೆ—ಇಷ್ಟಕ್ಕೆ ದಾರಿ ಮಾಡಲೇಬೇಕಾದ್ದರಿಂದ ಮನೆಯ ಉದ್ದವನ್ನು ೧೨ ಅಡಿ ಮಟ್ಟಿಗೆ ಹೆಚ್ಚಿಸಿದ್ದಾಯಿತು. ಅದೇ ಸಮಯದಲ್ಲಿ ಮನೆಯ ಯಜಮಾನಿತಿ ತನ್ನದೊಂದು ಬೇಡಿಕೆಯನ್ನು ಮುಂದಿಟ್ಟಳು. ಅವಳ ಕೊಠಡಿಯ ಮಗ್ಗುಲಲ್ಲಿ ಒಂದು ಸಣ್ಣ ನೀರಿನ ಮನೆ ಬೇಡವೆ?

ಈ ಬದಲಾವಣೆಗಳಿಂದ ಮನೆಯ ಕಟ್ಟಡ ಇನ್ನೂ ೨,೦೦೦ ಸಲೆಯಡಿಗಳಷ್ಟು ಹೆಚ್ಚಿತು.

ನಕ್ಷೆಯ ಕಾಗದದ ಮೇಲೆ ಮನೆ ಬೆಳೆಯುತ್ತ ಬಂದ ಹಾಗೆಲ್ಲಾ ಬ್ಲಾಂಡಿಂಗ್ಸರು ಅದನ್ನು ನೋಡಿ ಹಿಗ್ಗಿದ್ದೂ ಹಿಗ್ಗಿದ್ದೇ. ಮಧ್ಯೆ ಒಂದು

ಸಾರಿ ಬ್ಲಾಂಡಿಂಗ್ಸನ ಸ್ಫೂರ್ತಿ ಇದ್ದಕ್ಕಿದ್ದ ಹಾಗೆಯೇ ಅರಳಿತು. ತನ್ನ ರೂಮಿನ ಪಕ್ಕದಲ್ಲಿ ಹಜಾರಕ್ಕೆ ಸೇರಿದ ಹಾಗೆ ಮಧುಪಾನದ ಸಲಕರಣೆಗಳನ್ನಿಡುವುದಕ್ಕೂ ನಾಲ್ಕು ಜನ ಸ್ನೇಹಿತರು ಸೇರುವುದಕ್ಕೂ ಅನುಕೂಲಿಸುವಂತೆ ಒಂದು ಸಣ್ಣ 'ಬಾರ್' ಏಕೆ ಕಟ್ಟಬಾರದು? ಚಿಕ್ಕದಾಗಿ ಅಡಕವಾಗಿದ್ದರೆ ಸಾಕು. ಮನೆಯ ಯಜಮಾನನೇ ಸಲಹೆ ಕೊಟ್ಟಮೇಲೆ ಬೇಡವೆನ್ನುವುದಕ್ಕೆ ಸಿಮ್ಸ್ ಯಾರು! ಅವನಿಗೂ ಮಧುಪಾನದಲ್ಲಿ ಆಸಕ್ತಿಯಿಲ್ಲವೆನ್ನುವ ಹಾಗಿಲ್ಲ. ತಾನು ಆಗಿಂದಾಗ ಅಲ್ಲಿಗೆ ಬಂದು ಸಂಜೆಯ ಹೊತ್ತು ಅಲ್ಲಿ ಕುಳಿತು ಬ್ರಾಂದಿ ಸೋಡ ಸೇವಿಸುವ ಕಲ್ಪನಾದೃಶ್ಯ ಅವನ ಮನಸ್ಸಿನಲ್ಲಿ ಹೊಳೆದು ಹೋಯಿತು. "ನೋಡಿದರೆ ಇದು ೨೦,೦೦೦ ಡಾಲರಿನ ಮನೆಯೆಂದೇ ಕಾಣುತ್ತದೆ" ಎಂದುಕೊಂಡನು.

ನಕ್ಷೆ ಬರೆಯುವ ಕೆಲಸ ಕೊನೆಯ ಹಂತಕ್ಕೆ ಬಂದಿತ್ತು. ಈಚೆಗೆ ನಡೆದ ಮಂತ್ರಾಲೋಚನೆಗಳಲ್ಲೆಲ್ಲಾ ಬ್ಲಾಂಡಿಂಗ್ಸನ ಹೆಂಡತಿಯದೇ ಮುಖ್ಯ ಪಾತ್ರ. ಬ್ಲಾಂಡಿಂಗ್ಸನ ಸಹಾಯವನ್ನಾಗಲಿ ಅಭಿಪ್ರಾಯವನ್ನಾಗಲಿ ಯಾರೂ ಕೇಳುತ್ತಲೇ ಇರಲಿಲ್ಲ. ಮನೆಯ ಕೆಲಸ ತನ್ನ ಕೈ ಹಿಡಿತ ತಪ್ಪಿಸಿಕೊಂಡು ಸ್ವೇಚ್ಛೆಯಾಗಿ ಬೆಳೆಯುವುದಕ್ಕೆ ಮೊದಲಾಯಿತು. ಮನೆಯ ಮುಂಭಾಗದ ಮಹಡಿಯ ಮೇಲೆ ಒಂದು ಸ್ನಾನದ ಮನೆ ಮಾಡಿಸಬೇಕೆನ್ನುವ ಸಲಹೆಗೆ ಎಲ್ಲರ ಒಪ್ಪಿಗೆಯೂ ಮೊದಲೇ ದೊರೆತಿತ್ತು. ಆದರೆ ಯಜಮಾನಿತಿಗೆ ಈಗ ಅದು ಸರಿ ತೋರಲಿಲ್ಲ. ಸ್ನಾನದ ಮನೆಯನ್ನು ಮನೆಯ ಮುಂಭಾಗದಲ್ಲಿ ಕಟ್ಟುವುದು ಎಲ್ಲಾದರೂ ಉಂಟೆ, ಅವಲಕ್ಷಣ! ತನ್ನ ಇಷ್ಟಕ್ಕೆ ಪ್ರತಿಯಾಗಿ ವಾದಿಸಿದವರ ಮೇಲೆಲ್ಲಾ ಹುಲಿಯ ಹಾಗೆ ಬಿದ್ದು ಆಕೆಯೇ ಗೆದ್ದಳು. ಮನೆಯ ಹಿಂಭಾಗದಲ್ಲಿ ನಾಲ್ಕು ಅಡಿ ಕಟ್ಟಡ ಹೆಚ್ಚಿಸಿ ಸ್ನಾನದ ಮನೆಯನ್ನು ಅಲ್ಲಿಗೆ ವರ್ಗಾಯಿಸಬೇಕಾಯಿತು.

"ಮನೆಯ ಖರ್ಚು ವಿಷ ಏರಿದ ಹಾಗೆ ಏರುತ್ತಾ ಇದೆ. ಅದರ ವಿಷಯ ನಿಮ್ಮ ತಲೆಗೆ ಏನೇನೂ ಹೊಕ್ಕ ಹಾಗೆ ಕಾಣುವುದಿಲ್ಲ" ಎಂದು ಸಿಮ್ಸ್ ತಲೆ ಅಲ್ಲಾಡಿಸಿದನು.

ನಕ್ಷೆ ಬರೆದು ಪೂರ್ತಿಯಾಯಿತು. ಕಂಟ್ರಾಕ್ಟರುಗಳಿಂದ ಟೆಂಡರ್ ತರಿಸಿಕೊಳ್ಳುವ ಸಮಯ. ಅದಕ್ಕೆ ಮುಂಚೆಯೇ ನ್ಯಾಷನಲ್ ಬ್ಯಾಂಕಿನ ಅಧ್ಯಕ್ಷ ಡಾಲಿವರನ್ನು ನೋಡಿ ಹಣದ ವಿಷಯ ಮಾತಾಡಿ ಬಂದರೆ ಒಳ್ಳೆಯದೆಂದು ತೋರಿತು. ಬ್ಲಾಂಡಿಂಗ್ಸ್ ಈ ವಿಷಯವನ್ನು ಬಹಳ ಹಿಂದೆಯೇ ಯೋಚನೆಮಾಡಿ ಆ ಬ್ಯಾಂಕಿನಲ್ಲಿ ಚೆನ್ನಾಗಿ ಕಣ್ಣಿಗೆ ಕಾಣಿಸುವಷ್ಟು ಹಣವನ್ನು ಡಿಪಾಜಿಟ್ ಮಾಡಿದ್ದನು. ಬ್ಯಾಂಕಿನವರಿಗೆ ತನ್ನ ವಿಷಯದಲ್ಲಿ ನಂಬಿಕೆ ಹುಟ್ಟಬೇಕಷ್ಟೆ. ಹಣ ಕಟ್ಟುವುದಕ್ಕೆ ಹೋದಾಗ ಡಾಲಿವರ್ ಅವನನ್ನು ಬಹಳ ಸಂತೋಷದಿಂದ ಬರಮಾಡಿ ಕೊಂಡು "ಬ್ಯಾಂಕಿನಿಂದ ನಿಮಗೇನಾದರೂ ಸಹಾಯ ಬೇಕಾದಾಗ ನನಗೆ ತಿಳಿಸಿ" ಎಂದಿದ್ದನು. ಈಗ ಬ್ಲಾಂಡಿಂಗ್ಸ್ ತನ್ನ ಆಸ್ತಿಯನ್ನು ಈಡುಮಾಡಿ ಸಾಲ ತೆಗೆಯಬೇಕಾದ ಸಮಯ ಒದಗಿತ್ತು. "ಡಾಲಿ ವರ್ ಬಹಳ ಒಳ್ಳೆಯ ಮನುಷ್ಯ. ನನ್ನನ್ನು ಕಂಡರೆ ಅಭಿಮಾನವಿರುವ ಹಾಗೆ ಕಾಣುತ್ತೆ. ಈಗ ನಾನು ಹೋದರೆ ನಗುಮುಖದಿಂದ ಸ್ವಾಗತಿ ಸುತ್ತಾನೆ, ಒಳ್ಳೆಯ ಸಿಗಾರ್ ಕೊಡುತ್ತಾನೆ, ಬಹುಶಃ ಗ್ರೀನ್ ಹೋಟಲಿನಲ್ಲಿ ಟೀಗೆ ಕರೆಯುತ್ತಾನೆ—ಧರ್ಮದ ಬಡ್ಡಿಯ ಮೇಲೆ ಹಣ ಕೊಡುವ ವಿಷಯದಲ್ಲಂತೂ ಯಾವ ಸಂದೇಹವೂ ಇರಲಾರದು" ಎಂದುಕೊಂಡು ಬ್ಲಾಂಡಿಂಗ್ಸ್ ಬ್ಯಾಂಕಿನ ಕಡೆಗೆ ಹೊರಟನು.

ಆದರೆ ಅವನು ಯೋಚಿಸಿದ್ದೆಲ್ಲಾ ಮನಸ್ಸಿನಲ್ಲಿ ಮಂಡಿಗೆ ತಿಂದ ಹಾಗಾಯಿತು. ಡಾಲಿವರ್ ತಾನೇನೋ ಒಳ್ಳೆಯ ಸಿಗಾರ್ ತೆಗೆದು ಸೇದುವುದಕ್ಕಾರಂಭಿಸಿದರೂ ಬ್ಲಾಂಡಿಂಗ್ಸನಿಗೂ ಕೊಡಬೇಕೆಂದು ಅವ ನಿಗೆ ಹೊಳೆದಂತೆ ತೋರಲಿಲ್ಲ. ಇನ್ನು ಸಾಲದ ವಿಷಯ : "ನಾನೇನು ಮಾಡಲಿ? ನಾವು ರೂಲ್ಸು ಪ್ರಕಾರ ಎಷ್ಟು ಸಾಲ ಕೊಡಬಹುದೋ ಅಷ್ಟೂ ಈಗಾಗಲೇ ಕೊಟ್ಟಾಗಿ ಹೋಗಿದೆ. ನಿಮಗೆ ಸಹಾಯ ಮಾಡದೆ ಇನ್ನು ಯಾರಿಗೆ ಮಾಡಬೇಕು! ಆದರೆ ನೋಡಿ . . . ." ಮಾತು ಅಲ್ಲಿಗೇ ನಿಂತುಹೋಯಿತು. ಒಂದು ನಿಮಿಷ ಸುಮ್ಮನಿದ್ದು ಅನಂತರ "ಎದುರುಸಾಲಿನಲ್ಲಿ ಸೇವಿಂಗ್ಸ್ ಬ್ಯಾಂಕಿದೆಯಲ್ಲಾ, ಅಲ್ಲಿ ನನ್ನ ತಮ್ಮನೇ ಅಧ್ಯಕ್ಷ. ಅಲ್ಲೇನಾದರೂ ಅನುಕೂಲವಾಗಬಹುದೋ ಏನೋ" ಎಂದನು.

ಸೇವಿಂಗ್ಸ್ ಬ್ಯಾಂಕಿನ ಅಧ್ಯಕ್ಷನನ್ನು ಮೂರುಸಾರಿ ಭೇಟಿ ಮಾಡಿದ ಮೇಲೆ ಆತ ಶೇಕಡಾ ೬ ರಂತೆ ೧೦,೦೦೦ ಡಾಲರ್ ಸಾಲ ಕೊಡುವುದಕ್ಕೆ ಒಪ್ಪಿದ. ಬ್ಲಾಂಡಿಂಗ್ಸ್ "ನಾನು ಕಡಿಮೆ ಬಡ್ಡಿಯ ಮೇಲೆ ಇನ್ನೂ ಹೆಚ್ಚು ಹಣ ಸಿಕ್ಕಬಹುದೇನೋ ಎಂದಿದ್ದೆ" ಎಂದು ಸಣ್ಣ ದನಿಯಲ್ಲಿ ಅಹವಾಲು ಹಾಕಿದ್ದಕ್ಕೆ ಉತ್ತರವಾಗಿ ಒಂದು ಉಪನ್ಯಾಸ ಬಂತು—ಸ್ಥಿರಸ್ವತ್ತಿನ ಆಧಾರದ ಮೇಲೆ ಸಾಲ ಕೊಡುವುದು ಎಷ್ಟು ಅಪಾಯಕರ ಎಂಬ ವಿಷಯವಾಗಿ.

ಬ್ಲಾಂಡಿಂಗ್ಸ್ ಇನ್ನೇನೂ ಹೇಳಲಾರದೆ ಹೋದ. "ಪರವಾಯಿಲ್ಲ . . . ನಾನು ಹಣ ಪಡೆಯಬೇಕಾದರೆ ಇನ್ನೆಷ್ಟು ಕಾಲ ಹಿಡಿಯಬಹುದು? ಸದ್ಯದಲ್ಲೇ ನಾನು ಮನೆಯ ಪಾಯ ತೆಗೆಸಬೇಕಾಗಿದೆ."

ಅಧ್ಯಕ್ಷನು ಜಗ್ಗನೆ ಮೇಲಕ್ಕೆದ್ದ. "ಏನೆಂದಿರಿ, ನೀವು ಸಾಲ ಕೇಳಿದ್ದು ಮನೆ ಕಟ್ಟುವುದಕ್ಕೆ?"

ಏನೋ ಭಯಂಕರವಾದ ಅಪರಾಧ ಮಾಡಿದವನಂತೆ ಬ್ಲಾಂಡಿಂಗ್ಸ್ "ಹೌದು" ಎಂದ.

"ನೀವು ಹೇಳಿದ್ದನ್ನು ನಾನು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ. ಮನೆ ಕಟ್ಟುವುದಕ್ಕೆ ಸಾಲ ಕೊಡುವುದು ನಮ್ಮ ಬ್ಯಾಂಕಿನ ರೂಲ್ಸಿಗೆ ವಿರೋಧ—ಕ್ಷಮಿಸಬೇಕು. ಅದು ಸಾಧ್ಯವೇ ಇಲ್ಲ."

ಬ್ಲಾಂಡಿಂಗ್ಸನಿಗೆ ರೇಗಿ ಹೋಯಿತು. ಡಾಲಿವರನ ಬ್ಯಾಂಕಿನಲ್ಲಿಟ್ಟಿದ್ದ ಹಣವನ್ನೆಲ್ಲಾ ಆ ಕ್ಷಣವೇ ತೆಗೆದುಬಿಟ್ಟು ಒಂದು ವಾರ ಕಳೆದ ಮೇಲೆ ಹತ್ತಿರದ ಊರಿನಲ್ಲಿದ್ದ ಸೀಗೇಟ್ ಬ್ಯಾಂಕಿಗೆ ಹೋಗಿ ನಾಶವಾಗಿದ್ದ ತನ್ನ ಆತ್ಮ ಗೌರವವನ್ನು ಮತ್ತೆ ಸಂಪಾದಿಸಿಕೊಂಡು ಬಂದ. ಕೇವಲ ಒಂದು ಘಂಟೆಯ ಹೊತ್ತು ಮಾತು ನಡೆಯುವುದರೊಳಗೆ ಆ ಬ್ಯಾಂಕಿನವರು ಶೇಕಡಾ ೫ ರಂತೆ ೧೮,೦೦೦ ಡಾಲರ್ ಸಾಲ ಕೊಡಲೊಪ್ಪಿದರು. ಬೇರೆ ಕಡೆ ಸಾಲ ಪಡೆಯುವುದಕ್ಕೆ ಅಡ್ಡಿಯನ್ನು ಸಹ ಹಾಕಲಿಲ್ಲ. ಅವನ ಆಸ್ತಿಗೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಪರೀಕ್ಷೆಮಾಡಬೇಕೆಂದು ಒಂದೇ ಒಂದು ಷರತ್ತು ಹಾಕಿದರು.

ಬ್ಲಾಂಡಿಂಗ್ಸಿಗೆ ಸ್ವಲ್ಪ ಯೋಚನೆಗಿಟ್ಟುಕೊಂಡಿತು. ಮತ್ತೆ ಕಾಗದ ಪತ್ರ ಪರೀಕ್ಷೆ ಮಾಡುವುದೇನು? ಕ್ರಯ ಪತ್ರವನ್ನು ತೋರಿಸಿದ್ದಾಯಿತಲ್ಲ! ಬ್ಯಾಂಕಿನಿಂದ ನೆಟ್ಟಗೆ ತನ್ನ ವಕೀಲನ ಮನೆಗೆ ಹೋದ.

"ಏನಯ್ಯಾ ಬಿಲ್, ಈ ಆಸ್ತಿಯ ಸರ್ವಸಾತಂತ್ರ್ಯವೂ ನನ್ನದೆಂದು ಆಗಲೇ ಸ್ಥಿರವಾಗಲಿಲ್ಲವೆ? ಆಸ್ತಿ ಬರೆಸಿಕೊಂಡಾಗ ಆ ನ್ಯಾಯಧೀಶ ಕ್ವಾಂಡರ್‌ಗೆ ೧೨೫ ಡಾಲರು ಕೊಟ್ಟಿದ್ದು ವ್ಯರ್ಥವೆ?"

"ಛೇ ಛೇ, ಹಾಗಲ್ಲ, ನಮ್ಮ ಸ್ಥಳದ ಬ್ಯಾಂಕಾಗಿದ್ದರೆ ಈ ತೊಂದರೆಯೇನೂ ಇರುತ್ತಿರಲಿಲ್ಲ. ಆದರೆ ನೋಡು, ಸೀಗೇಟ್ ಬ್ಯಾಂಕಿನವರು ಬೇರೆ ಬೇರೆ ಊರಿನ ನೂರಾರು ಕುಳಗಳಿಗೆ ೫೦ ಲಕ್ಷದವರೆಗೂ ಸಾಲ ಕೊಟ್ಟಿದಾರೆ. ತಮ್ಮ ಭದ್ರತೆ ತಾವು ನೋಡಿಕೊಳ್ಳಬೇಕೋ ಬೇಡವೋ? ನಿನಗೇನೂ ತೊಂದರೆಯಿಲ್ಲ. ಹೆದರಬೇಡ. ಬಹುಶಃ ಬ್ಯಾಂಕಿನ ಕಡೆ ವಕೀಲನಿಗೆ ಒಂದಿನ್ನೂರು ಡಾಲರು ಕೊಡಬೇಕಾಗಬಹುದು. ಆದರೆ ನಿನ್ನ ಹಕ್ಕಿನ ವಿಷಯದಲ್ಲಿ ಅಂಥ ವಕೀಲನ ಅಭಿಪ್ರಾಯ ಪಡೆದರೆ ಒಳ್ಳೆಯದೇ ಅಲ್ಲವೆ?"

ಕೆಲವು ದಿನ ಕಳೆಯಿತು. ಒಂದು ದಿನ ಸಂಜೆ ಸಿಮ್ಸ್ ಗಂಭೀರ ಮುದ್ರೆ ಹಾಕಿಕೊಂಡು ಬಂದ. ಕಂಟ್ರಾಕ್ಟರುಗಳಿಂದ ಟೆಂಡರುಗಳು ಬಂದಿದ್ದವು. ಬ್ಲಾಂಡಿಂಗ್ಸ್ ಆ ಪಟ್ಟಿಯನ್ನು ನೋಡಿದ ಕ್ಷಣವೇ ಚೇಳು ಕಡಿದವನಂತೆ ಮೇಲಕ್ಕೆ ನೆಗೆದ. ಪಟ್ಟಿ ಕೈಯಿಂದ ಜಾರಿ ಬಿತ್ತು. ಅವನ ಹೆಂಡತಿ ಅದನ್ನು ತೆಗೆದುಕೊಂಡು ಓದಿದಳು.

| | | |
|---|---|---|
| ಆಂಟೊನಿ ಡೊಲರೋಸೊ | ...... | ೩೨,೧೧೭.೦೦ |
| ಕೇರೀಸ್ ಮತ್ತು ಪ್ಲಮ್‌ಲೈನ್ | ...... | ೩೪,೨೬೫.೦೦ |
| ಜೂಲಿಯಸ್ ಅಕಿಂಬೊ ಮತ್ತು ಕಂಪೆನಿ | ...... | ೩೭,೫೦೦.೦೦ |
| ಜಾಕ್, ಟೋಫೆಟ್ ಮತ್ತು ಪೇನ್ | ...... | ೨೮,೯೨೦.೫೦ |
| ಜಾನ್ ರೆಚ್ ಮತ್ತು ಮಕ್ಕಳು | ...... | ೩೦,೮೫೩.೦೦ |

ನಿಷ್ಪಕ್ಷಪಾತವಾದ ಮಟ್ಟಸದನಿಯಲ್ಲಿ ಸಿಮ್ಸ್ ತನ್ನ ಅಭಿಪ್ರಾಯವನ್ನು ಕೊಟ್ಟ: "ನೀವು ಇದರಲ್ಲಿ ಗಮನಿಸಬೇಕಾದ ಅಂಶ ಒಂದೆರಡಿವೆ. ಮೊದಲು—ಜೂಲಿಯಸ್ ಅಕಿಂಬೊವಿಗೆ ಈ ಕೆಲಸ ಬೇಕಿಲ್ಲ.

ಗೆರೆ ಕೊಯ್ದುಹಾಗೆ ೩೭,೫೦೦ ಡಾಲರ್ ಲೆಕ್ಕ ಹಾಕಿರುವುದನ್ನು ನೋಡಿದರೇ ಅದು ಸ್ಪಷ್ಟವಾಗಿ ಕಾಣುತ್ತೆ. ಆ ಮೇಲೆ ಜಾಕ್ ಟೋಫೆಟ್—ಅವನ ಟೆಂಡರೇನೋ ಉಳಿದೆಲ್ಲಕ್ಕಿಂತ ಕಡಿಮೆಯಿದೆ, ನಿಜ. ಆದರೂ ನನ್ನನ್ನು ಕೇಳಿದರೆ, ಅವನ ಟೆಂಡರನ್ನು ತುದಿಗಾಲಿನಿಂದ ಮುಟ್ಟಲೂ ಬಾರದು. ಯಾವಾಗಲೂ ಅವನು ಮೊದಲು ಕಡಿಮೆ ಅಂದಾಜು ಕೊಟ್ಟು ಕರಾರಾದ ಮೇಲೆ ಅದಕ್ಕೆ ಹೆಚ್ಚು, ಇದಕ್ಕೆ ಹೆಚ್ಚು ಎಂದು ಲೆಕ್ಕ ತೋರಿಸಿ ದುಡ್ಡು ಕಸಿಯುವ ಪದ್ಧತಿ. ಇನ್ನು ಉಳಿದವರು ಮೂರು ಜನ—ಅವರಲ್ಲಿ ರೆಚ್ ಬಹಳ ಒಳ್ಳೆಯ ಕೆಲಸಗಾರನೆಂದು ಹೆಸರುಪಡೆದವನು. ಅವನು ಕೇಳುವ ಹಣವೂ ತಕ್ಕಮಟ್ಟಿಗೆ ಕಡಿಮೆಯಾಗಿಯೇ ಇದೆ. ಒಟ್ಟಿನಲ್ಲಿ ಅವನ ಟೆಂಡರು ಒಪ್ಪಿಕೊಂಡರೆ ನಷ್ಟವಿಲ್ಲವೆಂದು ತೋರುತ್ತೆ....ಆದರೂ ಇನ್ನೂ ಸ್ವಲ್ಪ ಖರ್ಚು ಇಳಿಸಬೇಕು.''

ಇಳಿಸಬೇಕು! ಆ ವಿಷಯದಲ್ಲಿ ಯಾರೂ ಕಣಿ ಹೇಳಬೇಕಾದ ಅವಶ್ಯಕತೆಯಿರಲಿಲ್ಲ. ಬ್ಲಾಂಡಿಂಗ್ಸ್ ಬಹಳ ಯೋಚನೆ ಮಾಡಿದ. ೩೧,೦೦೦ ದ ಮನೆಯ ಖರ್ಚನ್ನು ಸ್ವಲ್ಪಮಟ್ಟಿಗೆ ಇಳಿಸಬಹುದೇನೊ. ಆದರೆ ಏನೇನು ಮಾಯಮಂತ್ರ ಮಾಡಿದರೂ ಅದನ್ನು ೨೧,೦೦೦ ಕ್ಕೆ ಇಳಿಸುವುದು ಸಾಧ್ಯವಾಗಲಿಲ್ಲ.

ಕೈಕೊಂಡ ಪ್ರಯತ್ನವನ್ನು ಈಗ ಬಿಡುವಹಾಗಿಲ್ಲ. ಇನ್ನೂ ಸಿಮ್ಸನಿಗೆ ಹಣ ಕೊಡಬೇಕಾದದ್ದು ಬೇರೆ ಕಾದಿದೆ. ಅವನು ಇದುವರೆಗೆ ತನ್ನ ಹಣದ ವಿಷಯ ಮಾತೆತ್ತಿರಲಿಲ್ಲ. ಅದರೆ ಅವನ ಶುಲ್ಕ ಎಲ್ಲರಿಗೂ ತಿಳಿದಹಾಗೆ ಮನೆಯ ಒಟ್ಟು ಬೆಲೆಯ ಮೇಲೆ ಶೇಕಡಾ ೧೦ ರಷ್ಟು. ಬ್ಲಾಂಡಿಂಗ್ಸ್ ಇಲ್ಲೊಂದು ಕಡೆ ಅಲ್ಲೊಂದು ಕಡೆ ಅಲ್ಪಸ್ವಲ್ಪ ಖರ್ಚು ಕಡಿಮೆಮಾಡುವ ಯೋಚನೆ ಮಾಡಿದ. ಕಿಟಕಿಗಳಿಗೆಲ್ಲಾ ಕಂಚಿನ ಚೌಕಟ್ಟು ಹಾಕಬೇಕೆಂದಿದ್ದವನು ಈಗ ಉಕ್ಕಾದರೂ ಸಾಕು ಎಂದುಕೊಂಡ. ಸ್ನಾನದ ಮನೆಯ ವ್ಯವಸ್ಥೆಯಲ್ಲಿ ಪುರಾತನ ರೋಮನ್ನರ ವೈಭವವನ್ನೇನೂ ಅನುಕರಿಸಬೇಕಾಗಿಲ್ಲವೆಂದು ನಿರ್ಣಯ ಮಾಡಿಕೊಂಡ.

ಎಷ್ಟು ಕಡಿಮೆ ಮಾಡಿದರೂ ಕಣ್ಣಿಗೆ ಕಾಣುವಂಥ ಉಳಿತಾಯ ವೇನೂ ಆಗಲಿಲ್ಲ. ಮನೆಯ ಮುಂದೆ ಸೊಗಸಾದ ಕಲ್ಲಿನ ತಾರಸಿ ಮಾಡಿಸಬೇಕೆಂದಿದ್ದ ಯೋಜನೆ ಈಗ ಹೋಯಿತು. ಆದರೆ ಅದರಿಂದ ಉಳಿದದ್ದು ಕೇವಲ ೧೭೨ ಡಾಲರು ಮಾತ್ರ. "ನಾನೇ ಅದನ್ನು ಕಟ್ಟಿಸ ಬೇಕೆಂದು ಹೇಳಿದ್ದರೆ ಅದಕ್ಕೆ ೭೦೦ ಡಾಲರು ಬೇಕಾಗುತ್ತೆಂದು ಹೇಳು ತ್ತಿದ್ದರು" ಎಂದು ಬ್ಲಾಂಡಿಂಗ್ಸ್ ಮನಸ್ಸಿನಲ್ಲೇ ರೇಗಿಕೊಂಡನು. ಈಚೆಗೆ ಅವನು ಮನೆಯ ವಿಷಯ ಯಾರೊಡನೆಯೂ ಮಾತೇ ಆಡು ತ್ತಿರಲಿಲ್ಲ. ಈ ಮನೆ ಕಟ್ಟುವ ಕೆಲಸಕ್ಕೆ ಕೈ ಹಾಕಿದರೆ ಹೆಜ್ಜೆ ಹೆಜ್ಜೆಗೂ ಮೋಸ. ಆಸ್ತಿಯನ್ನು ತನಗೆ ಮಾರಿದ ಏಜೆಂಟ್, ಬ್ಯಾಂಕಿನವರು, ರೆಚ್, ಸಿಮ್ಸ್, ಕೊನೆಗೆ ತನ್ನ ಹೆಂಡತಿ ಸಹ—ಎಲ್ಲರೂ ಮೋಸಗಾರರೇ. ಎಲ್ಲಾ ಸೇರಿ ತನ್ನನ್ನು ಹಾಳುಮಾಡುವುದಕ್ಕೆ ಮಸಲತ್ತು ಹೂಡಿದ್ದರು.

ಸುಮಾರು ೧೫ ದಿನ ಕಳೆದ ಮೇಲೆ ಬ್ಲಾಂಡಿಂಗ್ಸ್‌ನ ಹೆಂಡತಿ ಸಿಮ್ಸ್‌ನೊಡನೆ ಮಾತಾಡುತ್ತಾ "ನೋಡಿದಿರಾ, ರೆಚ್ ಕೇಳಿದ ಹಣ ವನ್ನು ೨೬,೯೯೯.೧೭ ಡಾಲರಿಗೆ ಇಳಿಸಿದೆವು. ಈಗ ಎಲ್ಲಾ ಸರಿಹೋ ಯಿತು" ಎಂದಳು.

"ಏನು, ಸರಿಹೋದದ್ದು?" ಬ್ಲಾಂಡಿಂಗ್ಸ್ ಗುರುಗುಟ್ಟಿದನು.

ಸಿಮ್ಸ್ ಅವನಿಗೆ ಸ್ವಲ್ಪ ಸಮಾಧಾನ ಹೇಳಿದ. "ನೀವು ಮೊದಲು ಏರ್ಪಾಡು ಮಾಡಿಕೊಂಡದ್ದಕ್ಕಿಂತ ಖರ್ಚು ಸ್ವಲ್ಪ ಹೆಚ್ಚೇನೋ ಆಯಿತು. ಆದರೆ ಮನೆ ಮಾತ್ರ ಲಕ್ಷಣವಾಗುತ್ತೆ. ಒಂದು ವಿಷಯದಲ್ಲಿ ಮಾತ್ರ ನೀವು ಖಡಾಖಂಡಿತವಾಗಿರಬೇಕು—ಈಗ ಕರಾರಿನಲ್ಲಿ ಏನು ಹೇಳಿದ್ದೀರೋ ಅದಕ್ಕಿಂತ ಹೆಚ್ಚಾಗಿ ಯಾವ ಕೆಲಸವನ್ನೂ ಮಾಡಿಸ ಬಾರದು."

ಬ್ಲಾಂಡಿಂಗ್ಸ್ ದಂಪತಿಗಳು ಏಕಕಂಠರಾಗಿ ಹೇಳಿದರು: "ಆ ಮಾತೇ ಇಲ್ಲ. ಈಗ ಹೇಳಿರುವುದಕ್ಕಿಂತ ಹೆಚ್ಚಾಗಿ ಒಂದು ಇಟ್ಟಿಗೆ ಸಹ ಉಪಯೋಗಿಸಕೂಡದು. ಅದು ಖಂಡಿತ." ಈ ನಿರ್ಧಾರವನ್ನು ಕೇಳಿ ಅಂತರಿಕ್ಷದಲ್ಲಿ ಗೃಹಾಭಿಮಾನದೇವತೆಗಳು ಹಿಡಿಯಲಾರದಷ್ಟು ನಕ್ಕರು.

ಶರದೃತು ಬಂತು ; ಜೊತೆಗೆ ಮನೆಯ ಪಾಯ ತೆಗೆಯುವುದಕ್ಕೆ ಒಂದು ಹಬೆಯ ಯಂತ್ರವೂ ಬಂತು. ಬ್ಲಾಂಡಿಂಗ್ಸನ ಹೆಂಡತಿಯ ಸಂತೋಷಕ್ಕೆ ಮಿತಿಯೇ ಇಲ್ಲ. ಬ್ಲಾಂಡಿಂಗ್ಸ್ ಕೂಡ ತನ್ನ ಅಸಮಾಧಾನವನ್ನು ಮರೆತು ನಗುಮುಖವಾಗಿದ್ದನು. ಹಬೆಯ ಯಂತ್ರ ಕೆಲಸ ಮಾಡುತ್ತಿದ್ದ ಶಬ್ದ ದೂರದಿಂದ ಕೇಳುತ್ತಿತ್ತು. ಅಂದು ಮಧ್ಯಾಹ್ನ ಮಿಸೆಸ್ ಬ್ಲಾಂಡಿಂಗ್ಸ್ ಗಂಡನ ಕೊಠಡಿಗೆ ಬಂದು " ಇದೇಕೆ, ಆ ಯಂತ್ರದ ಕೆಲಸ ನಿಂತುಹೋದ ಹಾಗೆ ಕಾಣುತ್ತೆ ? ಈಗ ಒಂದು ಘಂಟೆಯಿಂದ ಅದರ ಸದ್ದೇ ಇಲ್ಲ '' ಎಂದಳು.

" ಹೋಗಿ ನೋಡೋಣ, ಏನಾಗಿದೆ ಅಂತ."

ಒಬ್ಬರ ಕೈ ಮತ್ತೊಬ್ಬರು ಹಿಡಿದುಕೊಂಡು ಕಪಟವರಿಯದ ಮಕ್ಕಳಂತೆ ಇಬ್ಬರೂ ಬೆಟ್ಟ ಹತ್ತಿಹೋದರು. ತಮ್ಮ ಬೆಟ್ಟ ! ಮೇಲೆ ಹೋಗಿ ನೋಡಿದರೆ ಆ ಯಂತ್ರ ಸುಖವಾಗಿ ವಿಶ್ರಾಂತಿಯನ್ನು ಅನುಭವಿಸುತ್ತಿತ್ತು. ಅದನ್ನು ನಡೆಸುವವನು ತನ್ನ ಪೀಠದಲ್ಲಿ ಕುಳಿತು ಸಿಗರೇಟ್ ಸೇದುತ್ತಿದ್ದ. ಹತ್ತಿರದಲ್ಲೇ ಮೂರು ಜನ ಕೂಲಿಯವರು ಕೈ ಗುದ್ದಲಿಯಿಂದ ನೆಲವನ್ನು ಕೆರೆಯುತ್ತಿದ್ದರು. ನೆಲದಿಂದ ಒಂದು ಭಾರಿ ತಿಮಿಂಗಿಲದ ಬೆನ್ನು ಮೇಲಕ್ಕೇಳುವಂತಿತ್ತು.

ಯಂತ್ರ ನಡೆಸುತ್ತಿದ್ದ ಕಾಂಪೋ ಬಾಸೊ ಎಂಬವನ ಮುಖದಲ್ಲಿ ಬೇಸರ, ಸಂತೋಷ, ಎರಡೂ ಮಿಶ್ರವಾಗಿ ಕಾಣುತ್ತಿದ್ದವು. ಬ್ಲಾಂಡಿಂಗ್ಸನ ಕಡೆ ತಿರುಗಿ ಹೇಳಿದ :

" ನೋಡಿದಿರಾ ಈ ಹಾಳು ನೆಲವನ್ನ ?''

" ಏನು, ಕಲ್ಲುನೆಲವೊ ?''

" ಕಲ್ಲೇ !'' ಕಾಂಪೋ ಬಾಸೊ ವಿಲಕ್ಷಣವಾಗಿ ನಕ್ಕ. " ಅದು ಕಲ್ಲುನೆಲವಲ್ಲ, ಈ ಬೆಟ್ಟವೆಲ್ಲಾ ಒಂದು ಬಂಡೆ ! ಈಗ ನಾವು ಮನೆಗೆ ಹೋಗುತ್ತೇವೆ. ಒಂದು ವಾರದ ಮೇಲೆ ಡೈನಮೈಟ್ ಹಾಕಿ ಬಂಡೆ ಒಡೆಯಬೇಕು—ಡೈನಮೈಟ್ ತುಂಬ ಬೇಕಾಗುತ್ತೆ. ಅಂದರೆ ನಿಮಗೆ ಒಂದು ಅನುಕೂಲ ಅನ್ನಿ. ನಿಮ್ಮ ಮನೆ ಕುಸಿಯುತ್ತೆ ಅನ್ನುವ ಹೆದರಿಕೆಯೇ ಇಲ್ಲ. ಪಾಯ ಭದ್ರವಾಗಿರುತ್ತೆ."

ಬ್ಲಾಂಡಿಂಗ್ಸ್ ಮನೆಗೆ ಬಂದು ರೆಚ್ ಕೊಟ್ಟಿದ್ದ ಕರಾರು ಪಟ್ಟಿಯನ್ನು ತೆಗೆದು ನೋಡಿದ. "ಪಾಯ ತೆಗೆಯುವುದಕ್ಕೆ—ಒಟ್ಟು ೫೦೦ ಡಾಲರ್. ಆದರೆ ಬಂಡೆಯೇನಾದರೂ ಸಿಕ್ಕಿದ ಪಕ್ಷದಲ್ಲಿ, ಡೈನಮೈಟ್ ಕೆಲಸ ಸಲಿ ಅಡಿ ಒಂದಕ್ಕೆ—೦.೨೪ ಡಾಲರ್." ದರ ಅಷ್ಟೇನೂ ಹೆಚ್ಚಾಗಿ ಕಾಣಲಿಲ್ಲ. ಆದರೆ ಲೆಕ್ಕಮಾಡಿ ನೋಡಿದ ಮೇಲೆ ಬ್ಲಾಂಡಿಂಗ್ಸ್ ಬೆಚ್ಚಿದ. ೬೦ ಅಡಿ ಉದ್ದ × ೨೮ ಅಡಿ ಅಗಲ × ೬ ಅಡಿ ಆಳ = ೧೦,೦೮೦ ಸಲಿ ಅಡಿ.

ಅಷ್ಟು ಹೊತ್ತಿಗೆ ಸರಿಯಾಗಿ ಟೆಲಿಫೋನ್ ಘಂಟೆ ಹೊಡೆಯಿತು. ಬ್ಲಾಂಡಿಂಗ್ಸನಿಗೆ ಆಗ ಯಾರ ಮಾತೂ ಬೇಕಾಗಿರಲಿಲ್ಲ. ಆದರೂ ಟೆಲಿಫೋನ್ ಗ್ರಾಹಿಯನ್ನು ಕೈಗೆ ತೆಗೆದುಕೊಂಡ. ವಕೀಲನ ಧ್ವನಿ ಕೇಳಿ ಬಂತು. ಅದರಲ್ಲಿ ಒಂದು ಬಗೆಯ ದೇಶಾವರದ ಸಂತೋಷ ಕಾಣುತ್ತಿತ್ತು.

"ಹೆದರಬೇಕಾಗಿಲ್ಲ, ಜಿಮ್. ಆದರೂ ಸ್ವಲ್ಪ ತೊಂದರೆ ಬಂದಿದೆ."

"ಏನು ತೊಂದರೆ, ಎಂಥ ತೊಂದರೆ?"

"ಆ ಬ್ಯಾಂಕಿನ ವಕೀಲನ ಕೈಲಿ ಮಾತಾಡುತ್ತ ಇದ್ದೆ. . . . . ಆಸ್ತಿಯ ಹಕ್ಕಿನ ವಿಷಯ ಏನೋ ಸಂದೇಹ ಬಂದಹಾಗಿದೆ."

* * *

ಮಿಸೆಸ್ ಬ್ಲಾಂಡಿಂಗ್ಸಳ ದಿನಚರಿಯಿಂದ :—

ಅಕ್ಟೋಬರ್ ೧೦

ಜಿಮ್ಮಿಯ ನೆಗಡಿ ಇನ್ನೂ ವಾಸಿಯಾಗಿಲ್ಲ. ಮೂರು ದಿನಗಳಿಂದ ಹಾಸಿಗೆಯಲ್ಲೇ ಬಿದ್ದುಕೊಂಡು ಬಿಸಿ ಟಾಡಿ ಕುಡಿಯುತ್ತಿದ್ದಾನೆ. ನೆಗಡಿಯಾದರೆ ಇಷ್ಟೊಂದು ಟಾಡಿ ಏಕೆ ಕುಡಿಯಬೇಕೋ ಕಾಣೆ. ಮನೆಯ ಹಕ್ಕಿನ ವಿಷಯದಲ್ಲಿ ಅದೇನು ತೊಂದರೆಯೋ ನನಗೆ ತಿಳಿಯದು. ವಕೀಲರು ಹೇಳುವುದನ್ನು ನೋಡಿದರೆ ಹಾಲೆಕ್ಕಿಗೆ ತನ್ನ ತಂದೆಯ ಆಸ್ತಿಯನ್ನು ವಿಲೇವಾರಿ ಮಾಡುವ ಹಕ್ಕಿದೆಯೆನ್ನುವುದಕ್ಕೆ ದಾಖಲೆಯೇನೂ ಸಿಕ್ಕಿಲ್ಲವಂತೆ. ಆ ಹಕ್ಕು ತನಗಿದೆಯೆಂದು ತೋರಿಸುವುದಕ್ಕೆ ಅವನು ಈಗ ೧೦,೦೦೦ ಡಾಲರಿನ ಪ್ರಮಾಣಪತ್ರವೊಂದನ್ನು ಬರೆದು ಕೊಡಬೇಕಂತೆ. ಅವನು ಅದಕ್ಕೊಪ್ಪುವುದಿಲ್ಲ. ಈಗ ನಮ್ಮನ್ನು ಕಂಡರೆ

ಮಾತು ಸಹ ಆಡದೆ ಬೇರೆ ಕಡೆ ತಿರುಗಿಕೊಂಡು ಹೋಗುತ್ತಾನೆ.

ರೆಚ್ ತನಗೆ ಸ್ವಲ್ಪ ಹೆಚ್ಚು ಹಣ ಕೊಡಬೇಕೆಂದು ಕೇಳಿದ. ಕೊಡುವುದು ನ್ಯಾಯವಾಗಿಯೇ ತೋರುತ್ತದೆ. ಅವನಿಂದ ಡೈನಮೈಟ್ ಕೆಲಸಕ್ಕೆ ಕೊಡಬೇಕಾಗಿದ್ದ ಹಣ ಅರ್ಧ ಉಳಿಯಿತು. ಅವನ ಸಹಾಯ ವಿಲ್ಲದಿದ್ದರೆ ಆ ಕಾಂಪೋಬಾಸೊ ನಮ್ಮನ್ನು ಸುಲಿಗೆ ಮಾಡಿಬಿಡುತ್ತಿದ್ದ.

ನೊವೆಂಬರ್ ೧೫

ಡೈನಮೈಟ್ ಮಾಡಿದ ಕಲ್ಲನ್ನೆಲ್ಲಾ ಏನು ಮಾಡುವುದೋ ದೇವರೇ ಬಲ್ಲ. ಯಾರನ್ನು ಕೇಳಿದರೂ ಅದನ್ನು ತೆಗೆಯುವುದು ತಮ್ಮ ಕೆಲಸವಲ್ಲವೆನ್ನುತ್ತಾರೆ. ಸಿಮ್ಸನ್ನು ಕೇಳಿದರೆ ಬೇರೆ ಯಾವುದೋ ಮಾತು ತೆಗೆಯುತ್ತಾನೆ. ಕಲ್ಲು ಭಾರಿ ಬೆಟ್ಟದ ಹಾಗೆ ಹೆಬ್ಬಾಗಿಲಿನ ಮುಂದೆ ಬಿದ್ದಿದೆ. ರೆಚ್ ತೆಗೆಸಬಹುದೆಂದಿದ್ದೆ ಅವನು ತನ್ನ ಕರಾರಿ ನಲ್ಲಿ ಅದು ಸೇರಿಲ್ಲವೆಂದುಬಿಟ್ಟ. ಕರಾರಿನಲ್ಲೇನೋ ಅದನ್ನು ಕಾಣಿಸಿಲ್ಲ ವೆಂದು ಒಪ್ಪಬೇಕು.

ನೊವೆಂಬರ್ ೨೭

ದೇವರ ದಯ, ಬ್ಯಾಂಕಿನವರೇನೋ ಸಾಲದ ವಿಷಯ ಇನ್ನೇನೂ ತೊಂದರೆಯಿಲ್ಲವೆಂದು ಹೇಳಿದರಂತೆ. ಏತಕ್ಕೋ ಇನ್ನೂ ೫೦೦ ಡಾಲರ್ ಕೊಡಬೇಕಂತೆ. ಇದನ್ನು ಕೇಳಿ ಜಿಮ್ಮಿಯ ಕಣ್ಣು ಕೆಂಪ್ಪ ಗಾಯಿತು. ಏನಾದರೂ ಆಗಲಿ, ಹಣವೇನೋ ಬರುತ್ತದೆ.

* * * *

ಚಳಿಗಾಲ ಕಾಲಿಟ್ಟಿತು. ಮನೆಯ ಕೆಲಸ ಅರ್ಧಮಟ್ಟಿಗೆ ಮುಗಿ ದಿತ್ತು. ಕೊಠಡಿಗಳೆಲ್ಲಾ ಬಹಳ ಚಿಕ್ಕವೆಂದು ಮಿಸೆಸ್ ಬ್ಲಾಂಡಿಂಗ್ಸ ಳಿಗೆ ಅಸಮಾಧಾನ. "ಇದೇನೇ, ನಮ್ಮ ಹಜಾರ?" ಎಂದಳು.

"ಇರಬೇಕು"—ಬ್ಲಾಂಡಿಂಗ್ಸನಿಗೆ ರೇಗುವಷ್ಟು ತ್ರಾಣ ಸಹ ಉಳಿದಿರಲಿಲ್ಲ.

"ಇಲ್ಲಿ ಕುರ್ಚಿ ಮೇಜು ಇಡುವಷ್ಟು ಸ್ಥಳವೇ ಇಲ್ಲವಲ್ಲ?"

"ಕುರ್ಚಿ ಮೇಜು ಕೊಳ್ಳುವುದಕ್ಕೆ ಹಣವೆಲ್ಲಿದೆ, ಹೇಳು ಮೊದಲು."

* * *

ಜೆ. ಎಚ್. ಬ್ಲಾಂಡಿಂಗ್ಸರಿಂದ, ಜಾನ್ ರೆಚ್ ಅವರಿಗೆ:

ಪ್ರಿಯ ರೆಚ್,

ನೀನು ಕಳುಹಿಸುತ್ತಿರುವ ಲೆಕ್ಕಾಚಾರದಲ್ಲಿ ' ಹೆಚ್ಚಿಗೆ ' ಅಂಶಗಳು ಏರುತ್ತಾ ಇರುವುದನ್ನು ನೋಡಿ ನನಗೆ ಬಹಳ ಕಳವಳವಾಗಿದೆ. ನಾವು ಮೊದಲು ಕೊಟ್ಟಿದ್ದ ನಕ್ಷೆಯನ್ನಿಟ್ಟುಕೊಂಡು ನೋಡಿದರೆ ಬದಲಾವಣೆ ಯೇನೂ ಹೆಚ್ಚಾಗಿರುವ ಹಾಗೆ ಕಾಣುವುದಿಲ್ಲ. ಆದರೂ ದಿನಕ್ಕೆ ಇಪ್ಪತ್ತು ಸಲ ' ಹೆಚ್ಚಿಗೆ, ಬಿಲ್ ಬರುತ್ತಾ ಇದೆ.—ಇದು ನನಗೆ ಅರ್ಥವೇ ಆಗುವುದಿಲ್ಲ. ನಿನ್ನ ಕಾಗದದಿಂದ ಕೆಳಗೆ ಕಾಣಿಸಿರುವ ಉದಾಹರಣೆ ಗಳನ್ನೂ ಜೊತೆಗೆ ನನ್ನ ಅಭಿಪ್ರಾಯವನ್ನೂ ಕೊಟ್ಟಿದ್ದೇನೆ.

೧. " ಮೊದಲಿದ್ದ ಸ್ವಿಚ್ ಪೇನಲ್ ತೆಗೆದು ೨೨೦ ವೋಲ್ಟಿನ ಸ್ವಿಚ್‌ಪೇನಲ್ ಹಾಕಿದ್ದಕ್ಕೆ—ಡಾಲರ್ ೧೩೯. ೮೯ "—[ಇದಕ್ಕೆ ಏನು ಅರ್ಥ? ವಿದ್ಯುಚ್ಛಕ್ತಿಯ ಕೆಲಸಕ್ಕೆ ಬಿಲ್ ಮಾಡಿರುವುದು ಇದು ಎಂಟ ನೆಯ ಸಾರಿ!)

೨. " ಅಡಿಗೆ ಮನೆಯಲ್ಲಿ ಗೋಡೆ ಬೀರುಗಳನ್ನು ಬದಲಾಯಿಸು ವುದಕ್ಕೆ—ಡಾಲರ್ ೧೦೨.೦೦." (ಏತಕ್ಕೆ ಬದಲಾಯಿಸಬೇಕಾಗಿತ್ತು? ಗೋಡೆ ಬೀರು ಎಲ್ಲಿರಬೇಕು, ಹೇಗಿರಬೇಕು ಎನ್ನುವುದನ್ನೆಲ್ಲಾ ಮೊದಲೇ ಕೇಳಿ ನಿಶ್ಚಯಿಸಿಕೊಳ್ಳಬೇಕೋ ಬೇಡವೋ?)

೩ " ನೀರು ಶುದ್ಧಿಮಾಡುವ ಜುಜು ಯಂತ್ರವನ್ನು ಸ್ಥಾಪಿಸಿ ಕೊಟ್ಟಿದ್ದಕ್ಕೆ—ಡಾಲರ್ ೩೬೫.೫೦ " (ಈ ಯಂತ್ರವಿಲ್ಲವೆಂದು ಅಳು ತ್ತಿದ್ದವರು ಯಾರು! ಅದರ ಹೆಸರೆತ್ತಿದರೆ ನನಗೆ ಮೈಯೆಲ್ಲಾ ಉರಿ ಯುತ್ತೆ. ಅದಕ್ಕೆ ನಾನು ಹಣ ಕೊಡುವುದಿಲ್ಲ. ವಾಪಸು ತೆಗೆದು ಕೊಂಡು ಹೋಗಿ. ತೆಗೆದುಕೊಂಡು ಹೋದದ್ದಕ್ಕೆ ಮತ್ತೆ ನನಗೆ ಬಿಲ್ ಕಳುಹಿಸಬೇಡಿ.)

೪. " ಎಣ್ಣೆಯ ಬರ್ನರ್ ಸ್ಥಾನ ಬದಲಾಯಿಸಿದ್ದಕ್ಕೆ ೨೧೫.೦೦ " (ಎಣ್ಣೆಯ ಬರ್ನರಿನ ಸ್ಥಾನ ಬದಲಾಯಿಸಿಲ್ಲವೆಂದು ನಂಬಿದ್ದೇನೆ. ಅದು ನಕ್ಷೆಯಲ್ಲಿ ತೋರಿಸಿದ್ದ ಜಾಗದಲ್ಲಿಯೇ ಇರಬೇಕು.)

ಇದೆಲ್ಲಾ ಸೇರಿ ೮೨೨.೩೯ ಡಾಲರ್ ಆಗುತ್ತೆ–ಸಣ್ಣ ವಿಷಯವಲ್ಲ. ಮೇಲೆ ಕಾಣಿಸಿರುವ ಅಂಶಗಳ ವಿಷಯವಾಗಿ ನಿಮ್ಮಿಂದ ಬೇಗ ಪತ್ರ ಬರುವುದೆಂಬ ನಿರೀಕ್ಷೆಯಲ್ಲಿದ್ದೇನೆ.

ಮ|| ರಾ|| ಜೆ. ರೆಚ್ ಅವರಿಂದ, ಜೆ. ಎಚ್. ಬ್ಲಾಂಡಿಂಗ್ಸ್ ಅವರಿಗೆ :

ನಮ್ಮ ಅನುಭವದಲ್ಲಿ ಮನೆಯ ಮಾಲೀಕರು ಈ ರೀತಿ ಕಾಗದ ಬರೆದಿರುವುದು ಇದೇ ಮೊದಲು. ನಾವು ಮಾಡಿರುವ ಕೆಲಸಗಳಲ್ಲಿ ಎಷ್ಟೋ ಅಂಶಗಳು ಕರಾರಿನಲ್ಲಿಲ್ಲದೆ ಇದ್ದರೂ ನಿಮ್ಮ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಅವುಗಳಿಗೆ ಹೆಚ್ಚು ಖರ್ಚು ಹಾಕದೆ ಕೆಲಸಮಾಡಿದ್ದೇವೆ. ಹೀಗೆ ಹೇಳುತ್ತಾನೆಂದು ಕೋಪಿಸಬೇಡಿ—ನೀವು ಮತ್ತು ನಿಮ್ಮ ಪತ್ನಿಯವರು ಕಲೆತು ಈ ವಿಷಯಗಳನ್ನು ಚರ್ಚಿಸಿದರೆ ಒಳ್ಳೆಯದಲ್ಲವೆ? ಅಡಿಗೆ ಮನೆಯ ಬೀರುಗಳ ವಿಷಯ ನಾನು ಅವ ರೊಡನೆ ಚರ್ಚೆ ಮಾಡಿದಾಗ ಅವರು “ ಏನು ಖರ್ಚಾದರೂ ಸರಿಯೆ, ಅದನ್ನು ಬದಲಾಯಿಸಲೇಬೇಕು ” ಎಂದು ಹೇಳಿದ ಮೇಲೆಯೇ ನಾವು ಬದಲಾವಣೆಯ ಕೆಲಸಕ್ಕೆ ಕೈ ಹಾಕಿದೆವು.

ನೀವು ಸಿಮ್ಸರ ಸಲಹೆ ಪ್ರಕಾರ ಹಾಕಿಸಿದ್ದ ಸ್ವಿಚ್‌ಪೇನಲ್ ನೋಡಿ ಅದರಿಂದ ಬೆಂಕಿಯ ಅಪಾಯವುಂಟೆಂದು ವಿದ್ಯುಚ್ಛಕ್ತಿಯ ಇಲಾಖೆಯವರು ಹೇಳಿದ್ದರು. ನಿಮ್ಮ ಹಣೆಯ ಬರಹವೆಂದು ನಾವು ಸುಮ್ಮನಿರಬಹುದಾಗಿತ್ತು. ಆದರೆ ಮಾಡಿದ ಕೆಲಸ ನೆಟ್ಟಗಿರಬೇಕು ಎಂದುಕೊಂಡು ನಾವು ಅದನ್ನು ಬದಲಾಯಿಸಿದೆವು.

ನೀರು ಶುದ್ಧಿಮಾಡುವ ಜುಜು ಯಂತ್ರ ಬಹಳ ಉತ್ತಮ ದರ್ಜೆ ಯದು. ನಿಮ್ಮ ಬಾವಿಯ ನೀರು ಒಳ್ಳೆಯದಲ್ಲ. ಅದನ್ನು ಶುದ್ಧಿ ಮಾಡದೆ ಬಿಟ್ಟರೆ ಅದು ನಿಮ್ಮ ಹಂಡೆ, ನಲ್ಲಿಗಳು ಎಲ್ಲವನ್ನೂ ಕರಗಿಸಿ ಬಿಡುತ್ತದೆ. ನಾವು ಸಿಮ್ಸರೊಡನೆ ಈ ವಿಷಯ ಚರ್ಚಿಸಿದಾಗ ಅವರು ನಿಮಗೆ ಇದನ್ನು ತಿಳಿಸುವುದಾಗಿ ಹೇಳಿದರು.

ಇನ್ನು ಎಣ್ಣೆಯ ಬರ್ನರಿನ ವಿಚಾರ . . . .

ಜೆ. ಎಚ್. ಬ್ಲಾಂಡಿಂಗ್ಸರಿಂದ ಮ|| ರಾ|| ಜೆ. ರೆಚ್ ಅವರಿಗೆ :

೮೨೨.೩೯ ಡಾಲರಿಗೆ ಚೆಕ್ ಕಳುಹಿಸಿದ್ದೇನೆ. ಇನ್ನು ಮುಂದೆ

ಹೆಚ್ಚಿಗೆ ಅಂಶ ಯಾವುದಕ್ಕೂ ನಾನು ಜವಾಬ್ದಾರನಲ್ಲ.

* * *

ಬ್ಲಾಂಡಿಂಗ್ಸ್ ದಂಪತಿಗಳು ಮತ್ತೆ ಆ ಬೆಟ್ಟವನ್ನು ಹತ್ತಿದ್ದು ವಸಂತಕಾಲ ಬಂದಮೇಲೆ. ಮನೆ ಮುಗಿದಿತ್ತು. ಹಾಲುಗಲ್ಲಿನಲ್ಲಿ ಕಟ್ಟಿದಂತೆ ಶುಭ್ರವಾಗಿ ಹೊಳೆಯುತ್ತಿದ್ದ ಬಂಗಲೆಯನ್ನು ನೋಡಿದಾಗ ಬ್ಲಾಂಡಿಂಗ್ಸ್ ದಂಪತಿಗಳ ಆನಂದಕ್ಕೆ ಮಿತಿಯೇ ಇಲ್ಲ. ಬಂಗಲೆಗೆ ಹೋಗುವ ರಸ್ತೆ ಮಾತ್ರ ಸುಗಮವಾಗಿರಲಿಲ್ಲ. ಮಳೆ, ಚಳಿಗಾಲದ ಹಿಮ ಕರಗಿದ ನೀರು ಇವೆಲ್ಲಾ ಸೇರಿ ಮನೆಯ ಮುಂದೆ ಕೆಸರಿನ ಸಮುದ್ರವಾಗಿ ಅದರ ಮೇಲೆ ತೇಲುತ್ತಿರುವ ಹಡಗಿನಂತೆ ಮನೆ ಕಾಣುತ್ತಿತ್ತು. ಆ ಕೆಸರನ್ನು ದಾಟುವುದರಲ್ಲಿ ಅವರು ಧರಿಸಿದ್ದ ಜೋಡುಗಳು ಹಾಳಾಗಿ ಹೋದವು. ಆದರೂ ಆ ಭವ್ಯವಾದ ಬಂಗಲೆಯ ಸೌಂದರ್ಯವನ್ನು ನೋಡುವುದರಲ್ಲಿ ಇದನ್ನು ಮರೆತರು.

ಕೆಲವು ಸಣ್ಣ ಸಣ್ಣ ದೋಷಗಳೇನೋ ಇದ್ದವು. ಅಡಿಗೆಮನೆಯಲ್ಲಿ ಒಲೆಗಳ ಏರ್ಪಾಡು ಕೊನೆಗೂ ಸಮರ್ಪಕವಾಗಿ ತೋರಲಿಲ್ಲ. ಊಟದ ಮನೆಯಲ್ಲಿ ಬಹಳ ಖರ್ಚುಮಾಡಿ ಹಾಕಿಸಿದ್ದ ಬಣ್ಣದ ದೀಪಗಳು ಅವಲಕ್ಷಣವಾಗಿ ಕಂಡವು. ಮುಂದೆ ಅವರು ಮನೆಗೆ ಬಂದಾಗ ಆ ದೀಪದ ಬೆಳಕಿನಲ್ಲಿ ಊಟ ಮಾಡುವುದು ಅಸಹ್ಯವಾಗಿ ಅದನ್ನೆಲ್ಲಾ ತೆಗೆಸಿ ಬೇರೆ ದೀಪಗಳನ್ನು ಹಾಕಿಸಬೇಕಾಯಿತು. ಅಲ್ಲದೆ ಬಾಗಿಲುಗಳೊಂದನ್ನೂ ಸರಿಯಾಗಿ ಮುಚ್ಚುವುದಕ್ಕಾಗಲಿ ತೆಗೆಯುವುದಕ್ಕಾಗಲಿ ಆಗುತ್ತಿರಲಿಲ್ಲ.

ಆದರೇನು! ಬ್ಲಾಂಡಿಂಗ್ಸರು ಸೊಗಸಾದ ಬಂಗಲೆ ಕಟ್ಟಿದ ಹಾಗಾಯಿತು. ಮನೆದಳದ ವೆಚ್ಚ, ಮನೆಕಟ್ಟುವ ವೆಚ್ಚ, ಎಲ್ಲಾ ಸೇರಿ ೨೦,೦೦೦ ಡಾಲರಿಗೆ ಮೀರಕೂಡದೆಂದು ಅವರ ಮೊದಲಿನ ಹಂಚಿಕೆ. ವಾಸ್ತವವಾಗಿ ಎಷ್ಟು ವೆಚ್ಚವಾಯಿತೋ ಬ್ಲಾಂಡಿಂಗ್ಸನಿಗೆ ಮಾತ್ರ ಗೊತ್ತು. ಆದರೆ ೫೧,೦೦೦ ಡಾಲರ್ ಆಯಿತೆಂದರೆ ಅತಿಶಯೋಕ್ತಿಯಲ್ಲ.

---

# ಎಲಿಯನೋರ

ನನ್ನ ವಂಶದವರೆಲ್ಲರೂ ಬಹುಮಟ್ಟಿಗೆ ಕಲ್ಪನಾಜೀವನದಲ್ಲಿ ಓಲಾಡಿದವರು; ಅವರಲ್ಲಿ ರಾಗದ ಆವೇಶ ಅತಿಶಯವಾದ ಶಕ್ತಿ ಪಡೆದಿತ್ತು. ಭಾವಜೀವಿಯಾದುದರಿಂದ ಜನರು ನನ್ನನ್ನೂ ಹುಚ್ಚ ನೆಂದೇ ಕರೆದಿದ್ದಾರೆ. ಆದರೆ 'ಹುಚ್ಚು' ಎನ್ನುವುದು ಅತ್ಯುತ್ತಮ ತರದ ಪ್ರತಿಭೆಯಿರಬಹುದಲ್ಲವೆ? ಪ್ರಪಂಚದಲ್ಲಿ ಗಾಢವಾದ ಯೋಚನೆ ಗಳು ಹುಟ್ಟುವುದು ಬಹುಮಟ್ಟಿಗೆ ಒಂದು ಬಗೆಯ ಮನೋವಿಕಾರದಿಂದ. ಗಹನವಾದ ಸಮಸ್ಯೆಗಳು ಸಾಧಾರಣವಾದ ಬುದ್ಧಿಶಕ್ತಿಯನ್ನು ನಿಲು ಕುವುದಿಲ್ಲ; ಬುದ್ಧಿಶಕ್ತಿಯನ್ನು ಮೆಟ್ಟಿಸಿಲ್ಲುವ ಬೇರೊಂದು ಬಗೆಯ ಮನೋವೃತ್ತಿ ಬೇಕಾಗಬಹುದು. ಸಾಧಾರಣ ಜನರು ರಾತ್ರಿಯಲ್ಲಿ ಮಾತ್ರ ಕನಸುಕಾಣುತ್ತಾರೆ; ಅವರ ದೃಷ್ಟಿಗೆ ಎಷ್ಟೋ ವಿಷಯಗಳು ಗೋಚರವಾಗುವುದಿಲ್ಲ. ಆದರೆ ಹಗಲಿನಲ್ಲಿಯೇ ಕನಸು ಕಾಣುವವರು ಆ ವಿಚಿತ್ರ ಸ್ವಪ್ನದಲ್ಲಿ ಕಾಲದ ಎಲ್ಲೆಯನ್ನು ಮೀರಿ ಅನಂತದ ಸ್ವರೂಪ ವನ್ನು ಕ್ಷಣಕಾಲ ದಿಟ್ಟಿಸುತ್ತಾರೆ. ಆ ಕನಸಿನಲ್ಲಿ ಕೀಳುತರದ ತಿಳಿವಳಿಕೆ ಎಷ್ಟೇ ತುಂಬಿರಲಿ, ಉತ್ತಮತರದ ಜ್ಞಾನವೂ ಸ್ವಲ್ಪ ದೊರೆಯುತ್ತದೆ. ಅದನ್ನು ನೆಚ್ಚಿ ಈ ಸ್ವಪ್ನಜೀವಿಗಳು ದಿಕ್ಸೂಚಿಯನ್ನು ಸಹ ಬಯಸದೆ ತೇಜಸ್ಸಾಗರದಲ್ಲಿ ಯಾತ್ರೆ ಹೊರಡುತ್ತಾರೆ.

ನನ್ನನ್ನು ಹುಚ್ಚನೆಂದು ಕರೆಯಲಿ, ಅಭ್ಯಂತರವಿಲ್ಲ. ನನ್ನ ಮನಸ್ಸಿನಲ್ಲಿ ಬೇರೆ ಬೇರೆಯಾದ ಎರಡು ಪದರಗಳಿವೆಯೆಂದಾದರೂ ಒಪ್ಪಲೇಬೇಕು. ಒಂದರಲ್ಲಿ ನನ್ನ ಜೀವನದ ಪೂರ್ವಾರ್ಧದ ನೆನಪು ಗಳು ತಿಳಿಯಾಗಿಯೂ ಸ್ಪಷ್ಟವಾಗಿಯೂ ಚಿತ್ರಿತವಾಗಿವೆ. ಆ ನೆನಪು ಗಳ ವಿಷಯದಲ್ಲಿ ಸಂದೇಹಕ್ಕೆ ಅವಕಾಶವೇ ಇಲ್ಲ. ಆದರೆ ಇನ್ನೊಂದು ಪದರದಲ್ಲಿ ನನ್ನ ಈಗಿನ ಜೀವನಕ್ಕೆ ಸಂಬಂಧಪಟ್ಟ ನೆರಳುನೆರಳಾದ ಅಸ್ಪಷ್ಟ ಚಿತ್ರಗಳು ತುಂಬಿವೆ. ಅವುಗಳನ್ನು ನೀವು ನಂಬದೆ ಬಿಟ್ಟರೂ ಬಿಡಬಹುದು. ನಾನು ಈಗ ಯಾರ ನೆನಪುಗಳನ್ನು ಶಾಂತಮನಸ್ಕ

ನಾಗಿ ಬರೆಯುತ್ತಿದ್ದೇನೆಯೋ ಆ ನನ್ನ ಯೌವನದ ಪ್ರೇಯಸಿಯು ಬಹು ದಿನಗಳ ಹಿಂದೆಯೇ ಕಾಲವಾದ ನನ್ನ ಸೋದರತ್ತೆಯ ಒಬ್ಬಳೇ ಮಗಳು. ಅವಳ ಹೆಸರು ಎಲಿಯನೋರ. ಉಷ್ಣವಲಯದ ಸೂರ್ಯನ ಪ್ರಭೆಯಲ್ಲಿ, ವಿವಿಧವರ್ಣಗಳ ಗರಿಕೆಯುಳ್ಳ ಕಣಿವೆಯೊಂದರಲ್ಲಿ ನಾವು ಸರ್ವದಾ ಒಟ್ಟಿಗೆ ಇರುತ್ತಿದ್ದೆವು. ಗಗನಕ್ಕೆ ಮುತ್ತಿಡುವ ಪರ್ವತ ಶ್ರೇಣಿಯ ಮಡಿಲಿನಲ್ಲಿದ್ದ ಆ ಕಣಿವೆಯೊಳಕ್ಕೆ ದಾರಿ ತೋರುವವರಿಲ್ಲದೆ ಯಾರೂ ಪ್ರವೇಶಿಸಲಾಗುತ್ತಿರಲಿಲ್ಲ. ಎಂಟು ದಿಕ್ಕುಗಳಿಂದಲೂ ಅದರ ಮೇಲೆ ಬಗ್ಗಿನೋಡುವಂತಿದ್ದ ಬೆಟ್ಟಗಳು ಕಣಿವೆಯ ವಿಹಾರ ಸ್ಥಾನ ಗಳನ್ನು ಬಿಸಿಲಿನ ತಾಪದಿಂದ ಮರೆಮಾಡುತ್ತಿದ್ದುವು. ಅಲ್ಲಿಂದ ಬಹು ದೂರದವರೆಗೂ ಮನುಷ್ಯನ ಹೆಜ್ಜೆಯ ಗುರುತು ಸಹ ಕಾಣದು. ಆ ನಮ್ಮ ಸುಖದ ಬೀಡನ್ನು ತಲಪಬೇಕಾದರೆ ಸಾವಿರಾರು ವನತರುಗಳ ಎಲೆ ಕೊಂಬೆಗಳನ್ನು ಬಲಪ್ರಯೋಗದಿಂದ ತಳ್ಳಿಕೊಂಡು ಹೋಗ ಬೇಕು; ಸುಂದರವೂ ಪರಿಮಳಯುಕ್ತವೂ ಆದ ಕೋಟಿಗಟ್ಟಲೆ ಹೂವು ಗಳನ್ನು ತುಳಿದು ನಾಶಮಾಡಬೇಕು. ಆದ್ದರಿಂದ ನಾವು—ನಾನು, ಎಲಿಯನೋರ, ಮತ್ತು ಅವಳ ತಾಯಿ—ಹೊರಗಿನ ಪ್ರಪಂಚದ ಅರಿವೇ ಇಲ್ಲದೆ ಆ ಕಂದರದಲ್ಲಿ ಬಹುಕಾಲ ವಾಸಿಸುತ್ತಿದ್ದೆವು.

ಪರ್ವತವಲಯದ ಮಧ್ಯೆ ಇದ್ದ ನಮ್ಮ ಬೀಡಿನ ಮೇಲೆ, ಎತ್ತರ ದಲ್ಲಿ ಮಂಜುಮುಂಜಾಗಿ ಕಾಣುತ್ತಿದ್ದ ಪ್ರದೇಶದಿಂದ ಆಳವಾದ ಇರುಕಿ ನಲ್ಲಿ ನದಿಯೊಂದು ಇಳಿದು ಬರುತ್ತಿತ್ತು. ಅದರ ಪ್ರವಾಹದಲ್ಲಿದ್ದ ಹೊಳ ಪನ್ನು ನಾನು ಮತ್ತೆಲ್ಲಿಯೂ ಕಂಡಿಲ್ಲ—ನನ್ನ ಎಲಿಯನೋರಳ ಕಣ್ಣು ಗಳಲ್ಲಿ ಹೊರತು. ಅದು ಬೆಟ್ಟಗಳಲ್ಲಿ ಸುತ್ತಿ ಕಾಡುಗಳಲ್ಲಿ ಕದ್ದು ನುಸುಳಿಕೊಂಡು ಹರಿಯುತ್ತಾ ಕೊನೆಗೆ ತಾನು ಹುಟ್ಟಿದ ಪರ್ವತವನ್ನು ಬಿಟ್ಟು ದೂರದಲ್ಲಿ ಮಸಕುಮಸಕಾಗಿ ಕಾಣುತ್ತಿದ್ದ ಕಣಿವೆಯೊಂದರಲ್ಲಿ ಮರೆಯಾಗಿ ಹೋಗುತ್ತಿತ್ತು. ಅದರ ಪ್ರವಾಹದಲ್ಲಿ ಏನೋ ಒಂದು ಮೌನಕಾರಕ ಶಕ್ತಿಯಿದ್ದುದರಿಂದ ನಾವು ಅದನ್ನು ಮೌನವತಿಯೆಂದು ಕರೆಯುತ್ತಿದ್ದೆವು. ಸಾವಧಾನವಾಗಿ ಸೌಮ್ಯವಾಗಿ ಅತ್ತಿತ್ತ ಓಲಾಡಿ ಮುಂದುವರಿಯುವ ಆ ನದಿಯಿಂದ ಸ್ವಲ್ಪವೂ ಮರ್ಮರ ಶಬ್ದ ಕೇಳು

ತ್ತಿರಲಿಲ್ಲ. ಬಹಳ ಆಳವಾದ ಅದರ ಪಾತ್ರದಲ್ಲಿದ್ದ ಹರಳುಗಲ್ಲುಗಳು ಸಹ ಅಲ್ಲಾಡದೆ, ಇದ್ದ ಸ್ಥಳದಲ್ಲಿ ತೃಪ್ತಿಯಿಂದ ನಿಂತು ಮುತ್ತಿನಂತೆ ಹೊಳೆಯುತ್ತಿದ್ದವು. ಆ ನದಿಯ ದಡಗಳನ್ನೂ, ಎಲ್ಲೆಲ್ಲಿಂದಲೋ ಸರ್ಪ ಗಮನದಿಂದ ಕಣ್ಣು ಕೋರೈಸುವಂತೆ ಹೊಳೆದು ಬಂದು ಅದರ ಪ್ರವಾಹಕ್ಕೆ ಸೇರುತ್ತಿದ್ದ ಝುರಿಗಳ ದಡಗಳನ್ನೂ, ನದಿಯ ಪಾತ್ರದಿಂದ ಪರ್ವತಗಳವರೆಗೂ ಹಬ್ಬಿದ್ದ ಕಣಿವೆಯೆಲ್ಲವನ್ನೂ, ದಟ್ಟವಾಗಿ ಸಮನಾಗಿ ಬೆಳೆದಿದ್ದ ಸಣ್ಣ ವೆನಿಲ್ಲಾ ಪರಿಮಳಯುಕ್ತವಾದ ಗರಿಕೆಯ ಹಾಸು ಅಲಂಕರಿಸಿತ್ತು. ಅದರ ಮೇಲೆ ಉದಾರ ಹಸ್ತದಿಂದ ಎರಚಿದಂತಿದ್ದ ಅಪರಂಜಿಯ ಬಣ್ಣದ, ಬಿಳಿಯ, ನೀಲಿಯ, ಅಚ್ಚಗೆಂಪಿನ ಹೂವುಗಳು ತಮ್ಮ ದಿವ್ಯಸೌಂದರ್ಯದಿಂದ ನಮ್ಮ ಹೃದಯವನ್ನು ಸೇರಿ ಪರಮಾತ್ಮನ ವೈಭವವನ್ನೂ ಪ್ರೇಮವನ್ನೂ ಸಾರುತ್ತಿದ್ದವು.

ಆ ಹುಲ್ಲುಗಾವಲಿನ ನಡುವೆ ಅಲ್ಲಲ್ಲಿಯೇ ಗುಂಪುಗುಂಪಾಗಿ ಕನಸಿನ ಕಾಡುಗಳಂತೆ ವಿಚಿತ್ರಾಕಾರದ ಮರಗಳೆದ್ದಿದ್ದವು. ತೆಳ್ಳಗೆ ಎತ್ತರವಾಗಿ ಬೆಳೆದಿದ್ದ ಅವುಗಳ ಕಾಂಡಗಳು ಮಧ್ಯಾಹ್ನದ ಸಮಯದಲ್ಲಿ ಕಣಿವೆಯ ನಡುವೆ ಇಣಿಕಿ ನೋಡುತ್ತಿದ್ದ ಸೂರ್ಯನ ಕಿರಣಗಳನ್ನು ಎದುರುಗೊಳ್ಳುವಂತೆ ಸ್ವಲ್ಪ ಬಾಗಿದ್ದವು. ಇಲ್ಲಿ ಎಬೊನಿಯಂತೆ ಅಲ್ಲಿ ಬೆಳ್ಳಿಯಂತೆ ಹೊಳೆಯುತ್ತಿದ್ದ ಅವುಗಳ ತೊಗಟೆಯ ನುಣುಪನ್ನು ನಾನು ಮತ್ತೆಲ್ಲಿಯೂ ಕಾಣಲಿಲ್ಲ—ಎಲಿಯನೋರಳ ಕೆನ್ನೆಗಳಲ್ಲಿ ಹೊರತು. ಅವುಗಳ ಕೊಂಬೆಗಳಿಂದ ಕೊಂಕುಸಾಲುಗಳಲ್ಲಿ ಹೊರಟು ಗಾಳಿಯೊಡನೆ ಆಡುತ್ತಿದ್ದ ಪಚ್ಚೆಯ ಬಣ್ಣದ ಎಲೆಗಳು ಮಾತ್ರ ಕಾಣಿಸದಿದ್ದರೆ ಆ ಮರಗಳು ತಮ್ಮ ಪ್ರಭುವಾದ ಸೂರ್ಯನೆದುರಿಗೆ ನಮ್ರವಾಗಿ ತಲೆಬಾಗಿರುವ ಸಿರಿಯ ದೇಶದ ಮಹಾಸರ್ಪಗಳೆಂದು ಭಾವಿಸಬಹುದಾಗಿತ್ತು.

ಪ್ರಣಯವು ನಮ್ಮ ಹೃದಯವನ್ನು ಪ್ರವೇಶಿಸುವುದಕ್ಕೆ ಮುಂಚೆ ಹದಿನೈದು ವರ್ಷಕಾಲ ನಾನೂ ಎಲಿಯನೋರಳೂ ಆ ಕಣಿವೆಯಲ್ಲಿ ಜೊತೆಯಾಗಿ ತಿರುಗುತ್ತಿದ್ದೆವು. ಅವಳಿಗೆ ಹದಿನೈದು ವರ್ಷ ತುಂಬಿತು; ನನಗೆ ಇಪ್ಪತ್ತು ವರ್ಷ. ಒಂದು ದಿನ ಸಂಜೆ ಅಲ್ಲಿಯ ಸರ್ಪಾಕೃತಿಯ

ಮರಗಳ ಕೆಳಗೆ ನಾವು ಒಬ್ಬರನ್ನೊಬ್ಬರು ಅಪ್ಪಿಕೊಂಡು ನೀರಿನಲ್ಲಿ ಪ್ರತಿಬಿಂಬಿತವಾಗಿದ್ದ ನಮ್ಮ ರೂಪವನ್ನು ನೋಡುತ್ತ ಕುಳಿತಿದ್ದೆವು. ಒಂದು ಮಾತನ್ನೂ ಆಡಲಿಲ್ಲ. ಮಾರನೆಯ ದಿನ ಕೂಡ ನಮ್ಮ ಕಂಠದಿಂದ ಒಂದೆರಡು ಕಂಪಿತಸ್ವರದ ಮಾತುಗಳು ಮಾತ್ರ ಹೊರಟಿರಬಹುದು. ಆ ದಿನ ನಾವು ಮೌನವತಿಯ ಅಲೆಗಳಿಂದ ಪ್ರಣಯದೇವತೆಯನ್ನು ಆಕರ್ಷಿಸಿಕೊಂಡಿದ್ದೆವು ಹಿಂದೆ ನಮ್ಮ ಪೂರ್ವಿಕರ ಹೃದಯವನ್ನು ದಹಿಸಿದ್ದ ರಾಗವು ಆ ದೇವತೆಯ ಪ್ರಭಾವದಿಂದ ಅಂದು ನಮ್ಮ ಹೃದಯದಲ್ಲಿಯೂ ಉಜ್ವಲಿಸಿತು. ಅವರಲ್ಲಿ ಕಾಣಿಸಿಕೊಳ್ಳುತಿದ್ದ ರಾಗಾವೇಶವೂ ವಿಚಿತ್ರ ಬಯಕೆಗಳೂ ನಮ್ಮಲ್ಲಿ ಉಕ್ಕಿಹರಿದು ಆ ಬಣ್ಣಬಣ್ಣದ ಗರಿಕೆಯ ಕಣಿವೆಯಲ್ಲಿ ಅವರ್ಣನೀಯವಾದ ಆನಂದವನ್ನು ತುಂಬಿದವು. ಸಕಲವಸ್ತುಗಳೂ ಅದ್ಭುತವಾದ ಮಾರ್ಪಾಟಿಗೆ ಒಳಗಾದುವು. ಹಿಂದೆ ಎಂದೂ ಹೂವು ಬಿಡದಿದ್ದ ಮರಗಳಲ್ಲಿ ವಿಚಿತ್ರ ಸೌಂದರ್ಯವುಳ್ಳ ನಕ್ಷತ್ರಾಕಾರದ ಹೂವುಗಳು ಅರಳಿದವು. ಕಣಿವೆಯ ಮೇಲಿದ್ದ ಹಸುರಿನ ಹಾಸು ಮತ್ತಷ್ಟು ಹಸುರಾಯಿತು. ಅಲ್ಲಿದ್ದ ಬಿಳಿಯ ಹೂವುಗಳು ಒಂದೊಂದಾಗಿ ಹಿಮ್ಮೆಟ್ಟಿ ಅವಕ್ಕೆ ಬದಲು ಹತ್ತು-ಹತ್ತಾಗಿ ಅಚ್ಚಗೆಂಪಿನ ಹೂವುಗಳು ತಲೆಯೆತ್ತಿದುವು. ನಾವು ಹೆಜ್ಜೆಯಿಟ್ಟ ಕಡೆಯೆಲ್ಲಾ ಹೊಸ ಜೀವನ ಎದ್ದು ಕುಣಿಯುತ್ತಿತ್ತು. ಅದುವರೆಗೂ ನಮಗೆ ಕಾಣಿಸದಿದ್ದ ನೀಳವಾದ ಫ್ಲೆಮಿಂಗೋ ಪಕ್ಷಿಯು ವಿವಿಧವರ್ಣದ ಸಂಗಾತಿಗಳೊಡನೆ ತನ್ನ ಕೆಂಪು ಗರಿಗಳನ್ನು ಕೆದರಿ ನಮ್ಮ ಮುಂದೆ ಮೆರೆಯಿತು. ಚಿನ್ನ ಬೆಳ್ಳಿಯ ರೇಖೆಗಳಂತೆ ಹೊಳೆಯುವ ಮೀನುಗಳು ನದಿಯನ್ನು ತುಂಬಿ ಸುಳಿದಾಡಲಾರಂಭಿದುವು. ನದಿಯ ಆಳದಿಂದ ಮೆಲ್ಲಮೆಲ್ಲನೆ ಕಲರವವೆದ್ದು ಕೊನೆಗೆ ಇಯೋಲಸ್ಸಿನ ವಾದ್ಯಕ್ಕಿಂತಲೂ ಸುಶ್ರಾವ್ಯವಾದ ಗಾನವಾಗಿ ಪರಿಣಮಿಸಿತು. ಅದಕ್ಕಿಂತ ಮಧುರವಾದ ಗೀತೆಯನ್ನು ನಾನು ಎಲ್ಲಿಯೂ ಕೇಳಿಲ್ಲ—ಎಲಿಯನೋರಳ ಕೊರಳ ದನಿಯೊಂದು ಹೊರತು. ಬಹುದಿನಗಳಿಂದ ಸಂಧ್ಯಾತಾರೆಯ ಬಳಿ ಕಾಣುತ್ತಿದ್ದ ಮಹಾಮೇಘವು ಚಿನ್ನ ಕೆಂಪುಗಳ ಬಣ್ಣದಿಂದ ಹೊಳೆಯುತ್ತ

ಹೊರಟು ತನ್ನ ಅಂಚು ಪರ್ವತಶಿಖರಗಳನ್ನು ಮುಟ್ಟುವಷ್ಟು ಕೆಳಗಿಳಿದು, ಶಾಂತಿಯನ್ನು ಬೀರಿ ನಮ್ಮನ್ನು ಅತ್ಯಂತ ವೈಭವಯುಕ್ತವಾದ ಯಕ್ಷಪ್ರಪಂಚಕ್ಕೆ ಒಯ್ದು ಕಾಪಿಡುವಂತೆ ಆವರಿಸಿ ನಿಂತಿತು.

ಎಲಿಯನೋರಳ ಸೌಂದರ್ಯ ದೇವರಮಣಿಯರಿಗೆ ಸಹಜವಾದದ್ದು. ಆದರೆ ಅವಳು ಅಲ್ಲಿಯ ಹೂವುಗಳೊಡನೆ ಕಳೆದ ಅಲ್ಪಾವಧಿಯ ಜೀವನದಂತೆ ಅವಳ ಹೃದಯವೂ ಸರಳ, ನಿಷ್ಕಪಟ. ತನ್ನ ಹೃದಯವನ್ನು ತುಂಬಿದ್ದ ಪ್ರಣಯವನ್ನು ಅವಳು ಮರೆಮಾಚಲಿಲ್ಲ. ಕಣಿವೆಯಲ್ಲಿ ನಮ್ಮ ಅನುಭವಕ್ಕೆ ಒಂದ ಆಶ್ಚರ್ಯಕರವಾದ ಮಾರ್ಪಾಟನ್ನು ಚರ್ಚಿಸುತ್ತಾ ತಿರುಗುತ್ತಿದ್ದಾಗ ಅದರ ಗಹನವಾದ ಸ್ವರೂಪವನ್ನು ನನ್ನೊಡನೆ ಸಂಪೂರ್ಣವಾಗಿ ಪರೀಕ್ಷಿಸಿದಳು.

ಮನುಷ್ಯರೆಲ್ಲರೂ ಅನುಭವಿಸಲೇ ಬೇಕಾದ ಕೊನೆಯ ವಿಪತ್ಕರವಾದ ಪರಿವರ್ತನೆಯನ್ನು ಕುರಿತು ಮಾತಾಡುತ್ತಾ ಒಂದು ದಿನ ಅವಳು ಕಣ್ಣೀರು ಹಾಕಿಕೊಂಡಳು. ಷಿರಾಸಿನ ಕವಿಯ ಹಾಡುಗಳಲ್ಲಿ ವಾಕ್ಯಗಳು ಹೇಗೆ ಬದಲಾವಣೆ ಹೊಂದಿದರೂ ಒಂದೇ ತರದ ಚಿತ್ರಗಳು ಮತ್ತೆ ಮತ್ತೆ ಬರುವಂತೆ, ಅಂದಿನಿಂದಾಚೆಗೆ ಅವಳ ಮಾತುಗಳಲ್ಲಿ ಮತ್ತೆಮತ್ತೆ ಆ ವಿಷಯವೇ ಬರುತ್ತಿತ್ತು.

ಮೃತ್ಯು ದೇವತೆಯ ಕಟಾಕ್ಷ ತನ್ನ ಮೇಲೆ ಬಿದ್ದಿದೆಯೆಂದು ಅವಳಿಗೆ ತಿಳಿಯಿತು. ಅವಳು ಸೌಂದರ್ಯದಲ್ಲಿ ಪರಿಪೂರ್ಣತೆ ಪಡೆದದ್ದು–ಸಾಯುವುದಕ್ಕೆ ಮಾತ್ರ. ಆದರೆ ಸಾವಿಗಿಂತಲೂ ಹೆಚ್ಚಾಗಿ ಬೇರೊಂದು ಚಿಂತೆ ಅವಳನ್ನು ಬಾಧಿಸುತ್ತಿತ್ತು. ಒಂದು ದಿನ ಮುಚ್ಚಂಜೆ ಮೌನವತಿಯ ದಡದಲ್ಲಿ ಅದನ್ನು ನನಗೆ ತಿಳಿಸಿದಳು. ನಾನು ಅವಳನ್ನು ಆ ಕಣಿವೆಯಲ್ಲಿ ಹೂತಿಟ್ಟು, ಆ ಸುಖಮಯವಾದ ವಿಹಾರಸ್ಥಾನಗಳನ್ನು ಬಿಟ್ಟು, ಅಲ್ಲಿಗೆ ಮರಳಿ ಬಾರದಂತೆ ಹೊರಟುಹೋಗುವೆನೆಂದೂ, ಸದ್ಯದಲ್ಲಿ ಅವಳ ಸ್ವತ್ತಾಗಿ ನನ್ನ ಹೃದಯವನ್ನಾವರಿಸಿರುವ ಪ್ರೇಮವು ಹೊರಗಿನ ಪ್ರಪಂಚದ ಯಾವಳೋ ಕನ್ಯೆಯನ್ನು ಸೇರಬಹುದೆಂದೂ ಸಂದೇಹಗೊಂಡು ಅವಳು ಕೊರಗುತ್ತಿದ್ದಳು. ಅದನ್ನು ಕೇಳಿದಾಗ ನಾನು ಅವಳ ಕಾಲಿನ ಬಳಿ ಕುಳಿತು, " ಎಂದೆಂ

ದಿಗೂ ಮತ್ತಾವ ಹೆಂಗಸಿನ ಕೈಯನ್ನೂ ಹಿಡಿಯುವುದಿಲ್ಲ, ನನ್ನ ಪ್ರೇಯಸಿಯನ್ನು ಮರೆತು ಭ್ರಷ್ಟನಾಗುವುದಿಲ್ಲ, ಅವಳ ದಿವ್ಯ ಪ್ರೇಮದ ನೆನಪು ಅಳಿಯುವಂತೆ ಎಂದಿಗೂ ವರ್ತಿಸುವುದಿಲ್ಲ" ಎಂದು ಅವಳ ಸನ್ನಿಧಿಯಲ್ಲೂ, ಪರಮಾತ್ಮನ ಸನ್ನಿಧಿಯಲ್ಲೂ ಆಣೆಯಿಟ್ಟುಕೊಂಡೆನು. ನಾನು ಸ್ಥಿರಮನಸ್ಕನಾಗಿ ಪ್ರತಿಜ್ಞೆಮಾಡಿದ್ದಕ್ಕೆ ಭಗವಂತನನ್ನೇ ಸಾಕ್ಷಿಯಾಗಿ ಕೋರಿದೆನು. ನಾನು ವಚನ ಭ್ರಷ್ಟನಾದರೆ ದೇವರೂ, ದೇವಗಣಕ್ಕೆ ಸೇರಿರುವ ಎಲಿಯನೋರಳೂ ನನ್ನನ್ನು ಶಪಿಸಲಿ, ನನಗೆ ವರ್ಣನಾತೀತವಾದ ಭಯಂಕರ ವಿಪತ್ತು ಸಂಭವಿಸಲಿ, ಎಂದು ಆಣೆಯಿಟ್ಟುಕೊಂಡೆನು. ನನ್ನ ಪ್ರತಿಜ್ಞೆಯನ್ನು ಕೇಳಿದ ಮೇಲೆ ಎಲಿಯನೋರಳ ನಕ್ಷತ್ರದಂಥ ಕಣ್ಣುಗಳ ಕಾಂತಿಯೇರಿತು, ಹೃದಯದಿಂದ ದೊಡ್ಡದೊಂದು ಭಾರವು ಕಳಚಿಬಿದ್ದಂತೆ ಅವಳು ನಿಟ್ಟುಸಿರುಬಿಟ್ಟು, ನೈಕಂಪಿಸಿ, ಅನಂತರ ಬಿಕ್ಕಿ ಬಿಕ್ಕಿ ಅತ್ತಳು. ಆದರೆ—ಆಗ ಅವಳಿನ್ನೂ ಹುಡುಗಿ—ಅವಳು ನನ್ನ ಪ್ರತಿಜ್ಞೆಯನ್ನು ಸ್ವೀಕರಿಸಿದಳು. ಅದರಿಂದ ಮನಸ್ಸು ಸಮಾಧಾನಗೊಂಡು ಎರಡು ಮೂರು ದಿನಗಳ ಮೇಲೆ ಶಾಂತಮನಸ್ಕಳಾಗಿ ಪ್ರಾಣಬಿಟ್ಟಳು. ಸಾಯುವಾಗ ನನ್ನನ್ನು ಹತ್ತಿರ ಕರೆದು, "ನೀನು ನನ್ನ ಆತ್ಮದ ಸಮಾಧಾನಕ್ಕೋಸ್ಕರ ಮಾಡಿದ ಪ್ರತಿಜ್ಞೆಯ ಸಲುವಾಗಿ ನಾನು ಸತ್ತ ಮೇಲೂ ನಿನ್ನನ್ನು ರಕ್ಷಿಸಲು ನಿನ್ನ ಬಳಿ ಕಾವಲಿರುತ್ತೇನೆ. ಹಾಗೆ ನಿನ್ನ ಬಳಿಗೆ ಬರಲು ಅಪ್ಪಣೆಯಿದ್ದರೆ ರಾತ್ರಿಯ ಯಾಮಗಳಲ್ಲಿ ನಿನ್ನ ಕಣ್ಣಿಗೆ ಸಹ ಕಾಣಿಸಿಕೊಳ್ಳುತ್ತೇನೆ. ಆದರೆ ಸ್ವರ್ಗದಲ್ಲಿರುವ ಆತ್ಮಕ್ಕೆ ಆ ಶಕ್ತಿಯಿಲ್ಲದಿದ್ದರೆ ಸಂಜೆಗಾಳಿಯ ಸುಯ್ಯಲಿನಲ್ಲೋ ಅದರಲ್ಲಿ ತೇಲಿಬಿಟ್ಟ ಪರಿಮಳದಲ್ಲೋ ನಾನು ನಿನ್ನ ಬಳಿ ಇರುವೆನೆಂಬುದಕ್ಕೆ ಸುಳಿವು ಕೊಡುತ್ತೇನೆ" ಎಂದು ಹೇಳಿ ತನ್ನ ನಿಷ್ಕಳಂಕ ಜೀವನವನ್ನು ತೊರೆದಳು. ನನ್ನ ಜೀವನದ ಮೊದಲನೆಯ ಪರ್ವ ಅಲ್ಲಿಗೆ ಕೊನೆಗಂಡಿತು.

ಇದುವರೆಗೆ ನಡೆದದ್ದೆಲ್ಲವನ್ನೂ ಸ್ಪಷ್ಟವಾಗಿ ಬರೆದಿದ್ದೇನೆ. ಆದರೆ ಕಾಲಪಥದಲ್ಲಿ ನನ್ನ ಪ್ರೇಯಸಿಯ ಮರಣವು ನೆಟ್ಟ ಮೇರೆಗಲ್ಲನ್ನು

ದಾಟಿ, ನನ್ನ ಜೀವನದ ಎರಡನೆಯ ಪರ್ವವನ್ನು ಕುರಿತು ಬರೆಯುಲು ಹೊರಟರೆ ಬುದ್ಧಿಶಕ್ತಿಯ ಮೇಲೆ ಏನೋ ಒಂದು ನೆರಳು ಬಿದ್ದಂತಾಗಿ ನಾನು ಬರೆಯುವುದು ಸತ್ಯವೋ ಭ್ರಮೆಯೋ ಎಂಬ ಸಂಶಯ ಬರುತ್ತದೆ. ಆದರೂ ಮುಂದುವರಿಯುತ್ತೇನೆ. ಒಂದಾದ ಮೇಲೊಂದು ವರ್ಷಗಳು ಕಾಲೆಳೆದುಕೊಂಡು ಹೋಗುತ್ತಿದ್ದವು. ನಾನು ಆ ಕಣಿವೆಯಲ್ಲೇ ವಾಸಿಸುತ್ತಿದ್ದೆನು. ಆದರೆ ಅಲ್ಲಿಯ ವಸ್ತುಗಳೆಲ್ಲವೂ ಮತ್ತೊಂದು ಬಗೆಯ ಮಾರ್ಪಾಟು ಹೊಂದಿದವು. ನಕ್ಷತ್ರಾಕಾರದ ಹೂವುಗಳೆಲ್ಲವೂ ಮರಗಳ ತಾಳಿನಲ್ಲೇ ಅಡಗಿ ಹೋದವು; ಮತ್ತೆ ಕಾಣಿಸಲಿಲ್ಲ. ಹಸುರು ಹಾಸಿನ ಉಜ್ವಲ ವರ್ಣವು ಮಾಸಿಹೋಯಿತು. ಅಚ್ಚಕೆಂಪಿನ ಹೂವುಗಳು ಬಾಡಿ ಹೋದವು. ಅವುಗಳಿದ್ದ ಸ್ಥಳದಲ್ಲಿ ಸದಾ ಮಂಜಿನ ಹೊರೆಯನ್ನು ಹೊತ್ತು ಕಷ್ಟದಿಂದ ನುಲಿದುಕೊಳ್ಳುತ್ತಿದ್ದ ನೀಲಿಯ ಹೂವುಗಳು ಹತ್ತು-ಹತ್ತಾಗಿ ಕಾಣಿಸಿಕೊಂಡವು. ಜೀವನದ ನೃತ್ಯವು ನನ್ನ ದೃಷ್ಟಿಪಥದಿಂದ ಮರೆಯಾಯಿತು. ಉನ್ನತಶರೀರದ ಫೆಮಿಂಗೋ ಪಕ್ಷಿಯು ತನ್ನ ಕೆಂಪು ಗರಿಗಳನ್ನು ಮೆರೆಯಿಸದೆ ಸಂಗಾತಿಗಳೊಡನೆ ವ್ಯಾಕುಲದಿಂದ ಬೆಟ್ಟಗಳ ಕಡೆಗೆ ಹಾರಿ ಹೋಯಿತು. ಚಿನ್ನ ಬೆಳ್ಳಿಯ ಕಾಂತಿಯಿಂದ ಹೊಳೆಯುತ್ತಿದ್ದ ಮೀನುಗಳು ನಮ್ಮ ಕಣಿವೆಯ ಕೆಳಭಾಗದಲ್ಲಿದ್ದ ಮತ್ತೊಂದು ಕಣಿವೆಯೊಳಕ್ಕೆ ಈಜಿ ಹೋದವು; ಮತ್ತೆ ಬರಲಿಲ್ಲ. ಇಯೋಲಸ್ಸಿನ ವಾದ್ಯಕ್ಕಿಂತಲೂ ಸುಶ್ರಾವ್ಯವಾಗಿ, ಎಲಿಯನೋರಳ ಕೊರಳದನಿಯೊಂದು ಹೊರತು ಉಳಿದುದೆಲ್ಲಕ್ಕಿಂತಲೂ ಇಂಪಾಗಿ ಮನಸ್ಸಿಗೆ ಶಾಂತಿ ನಿದ್ರೆಯನ್ನು ತರುತ್ತಿದ್ದ ಮಂಜುಳ ಗಾನವೂ ದಿನೇ ದಿನೇ ಕುಗ್ಗಿ ಕೊನೆಗೆ ಕೇಳಿಸದಂತಾಯಿತು. ನದಿಯ ಕಲರವವೂ ದಿನೇ ದಿನೇ ಕ್ಷೀಣವಾಗಿ ಕೊನೆಗೆ ನದಿಯು ಮೊದಲಿನ ಮೌನವನ್ನವಲಂಬಿಸಿತು. ನಮ್ಮ ಬೆಟ್ಟಗಳ ಮೇಲೆ ನೆಲಸಿ ಕಣಿವೆಗೆ ಚಿನ್ನರನ್ನದ ವೈಭವವನ್ನು ಹೊದಿಸಿದ್ದ ಮಹಾಮೇಘವು ಮತ್ತೆ ಮೇಲಕ್ಕೆದ್ದು ಸಂಧ್ಯಾತಾರೆಯ ಬಳಿ ಇದ್ದ ಮುಸುಕು ಪ್ರಪಂಚವನ್ನು ಸೇರಿತು.

ಆದರೆ ಎಲಿಯನೋರಳು ಮಾತ್ರ ನನಗೆ ಕೊಟ್ಟಿದ್ದ ಭಾಷೆಯನ್ನು

ಮರೆಯಲಿಲ್ಲ. ಆಗಾಗ ದೈವಿಕ ಪರಿಮಳದ ತೂಗುಪಾತ್ರೆಗಳು ಗಾಳಿಯಲ್ಲಿ ಓಲಾಡಿದ ಶಬ್ದ ನನಗೆ ಕೇಳುತ್ತಿತ್ತು. ಆ ಪರಿಮಳದಿಂದ ಕಣಿವೆಯೆಲ್ಲವೂ ತುಂಬಿತ್ತು. ನನ್ನ ಒಂಟಿ ಜೀವನವು ಅತ್ಯಂತ ಕಷ್ಟತರವಾಗಿ ತೋರಿದಾಗ, ಹೃದಯ ನೋವಿನಿಂದ ತುಡಿಯುತ್ತಿದ್ದಾಗ, ನನ್ನ ಮುಖದ ಮೇಲೆ ಸುಳಿಯುವ ಗಾಳಿ ಮೃದುವಾದ ನಿಟ್ಟುಸಿರನ್ನು ಹೊತ್ತು ತರುತ್ತಿತ್ತು. ಅನೇಕ ವೇಳೆ ರಾತ್ರಿಯ ಆವರಣದಲ್ಲಿ ಅಸ್ಪಷ್ಟವಾದ ಮೆಲುದನಿಯೂ ಕೇಳಿಬರುವುದು. ಒಂದು ಸಲ—ಅಯ್ಯೋ, ಒಂದೇ ಒಂದು ಸಲ ಮಾತ್ರ—ಸ್ವರ್ಗೀಯವಾದ ಅಧರಚುಂಬನವು ಮರಣದಂತಿದ್ದ ನಿದ್ರೆಯಿಂದ ನನ್ನನ್ನು ಎಚ್ಚರಿಸಿತು.

ಇಷ್ಟಾದರೂ ನನ್ನ ಹೃದಯದ ಶೂನ್ಯ ತುಂಬಲಿಲ್ಲ. ಅದರಲ್ಲಿ ಮೊದಲು ತುಳುಕುತ್ತಿದ್ದ ಪ್ರೇಮಕ್ಕಾಗಿ ನಾನು ಕಾತರನಾಗಿದ್ದೆನು. ಎಲಿಯನೋರಳ ನೆನಪನ್ನು ಸದಾ ಮನಸ್ಸಿಗೆ ತರುತ್ತಿದ್ದ ಆ ಕಣಿವೆಯ ಸಂಕಟ ತಡೆಯಲಾರದೆ, ಅದನ್ನು ಬಿಟ್ಟು ಪ್ರಾಪಂಚಿಕಜೀವನಕ್ಕೂ ಅದರ ಹುಲುಬಯಕೆಗಳಿಗೂ ಮನಸೋತು ಹೊರಟುಹೋದೆನು.

ನಾನು ಹೋಗಿ ಸೇರಿದ್ದು ಯಾವುದೋ ದೊಡ್ಡ ಪಟ್ಟಣ. ಅಲ್ಲಿಯ ಪರಿಸ್ಥಿತಿ ನಮ್ಮ ಕಣಿವೆಯ ಸವಿಗನಸುಗಳನ್ನೆಲ್ಲಾ ನೆನಪಿನಿಂದ ತೊಡೆದುಹಾಕುವಂತಿತ್ತು. ಅಟ್ಟಹಾಸದಿಂದ ಮೆರೆಯುವ ರಾಜಾಸ್ಥಾನ, ಆಯುಧಗಳ ಖಣಖಣಧ್ವನಿ, ಸ್ತ್ರೀಯರ ದಿವ್ಯಸೌಂದರ್ಯ—ಇವೆಲ್ಲವೂ ನನ್ನನ್ನು ಮುಸುಕಿ ಮತ್ತನನ್ನಾಗಿ ಮಾಡಿದವು. ಆದರೂ ನನ್ನ ಆತ್ಮವು ಹಿಂದಿನ ಪ್ರತಿಜ್ಞೆಯನ್ನು ಮರೆತಿರಲಿಲ್ಲ. ನಿಶ್ಶಬ್ದವಾದ ರಾತ್ರಿಯಲ್ಲಿ ಎಲಿಯನೋರಳು ನನ್ನ ಹತ್ತಿರದಲ್ಲಿರುವ ಸುಳಿವು ಆಗಾಗ ತಿಳಿಯಬರುತ್ತಿತ್ತು. ಹಠಾತ್ತಾಗಿ ಅದು ನಿಂತುಹೋಗಿ ನನ್ನೆದುರಿನ ಪ್ರಪಂಚವೆಲ್ಲ ಅಂಧಕಾರಮಯವಾಯಿತು. ನನ್ನನ್ನು ತುಯ್ಯುತ್ತಿದ್ದ ಭಯಾನಕವಾದ ಆಸೆಗಳಿಂದ, ದಹಿಸುತ್ತಿದ್ದ ಚಿಂತೆಗಳಿಂದ, ನಾನು ಮತಿಗೆಟ್ಟು ನಿಂತೆನು. ಅಲ್ಲಿಯ ರಾಜನ ಅರಮನೆಗೆ ಯಾವುದೋ ದೂರದೇಶದಿಂದ ಸುಂದರಿಯೊಬ್ಬಳು ಬಂದು ನನ್ನ ಹೇಡಿಹೃದಯವನ್ನು ಸೆರೆಹಿಡಿದಳು. ಅವಳನ್ನು ಕ್ಷಣಮಾತ್ರವೂ ಎದುರಿಸಲಾರದೆ ಮಿತಿ

ವಿಾರಿ ಮೋಹಗೊಂಡು ದಾಸಾನುದಾಸನಾಗಿ ಅವಳಿಗೆ ಶರಣುಬಿದ್ದೆ. ಅವಳ ಆರಾಧನೆಗಾಗಿ ನನ್ನನ್ನು ಸೆಳೆದೊಯ್ದ ಈ ಉದ್ರೇಕ, ಪಾದಾಕ್ರಾಂತನಾಗಿ ಕಣ್ಣೀರು ಕರೆಯುವಂತೆ ಮಾಡಿದ ಉನ್ಮಾದ ಪಂಚಪ್ರಾಣಗಳನ್ನೂ ಸುಡುತ್ತಿದ್ದ ಹೃದಯಜ್ವರ—ಇದೆಲ್ಲಿ, ಆ ಕಣಿವೆಯ ಹುಡುಗಿಯ ಮೇಲಿನ ಪ್ರೇಮವೆಲ್ಲಿ! ಆಹಾ, ಎರ್ಮನ್‘ಗಾರ್ಡಳೆಂದರೆ ಅಪ್ಸರೆ! ನನ್ನ ಹೃದಯದಲ್ಲಿ ಅವಳ ಹೊರತು ಬೇರೊಬ್ಬಳಿಗೆ ಸ್ಥಳವಿಲ್ಲ. ಎರ್ಮನ್‌ಗಾರ್ಡಳು ಸೌಂದರ್ಯದ ಅಧಿದೇವತೆ. ಅವಳ ಕಣ್ಣುಗಳ ಅಂತರಾಳವನ್ನು ಎಂದು ನೋಡಿದೆನೋ ಅಂದೇ ನನ್ನ ಮನಸ್ಸು ಅವಳಲ್ಲಿ ನೆಟ್ಟುಹೋಯಿತು.

ಅವಳನ್ನು ಮದುವೆಯಾದೆನು. ನಾನು ಇಟ್ಟುಕೊಂಡಿದ್ದ ಆಣೆಗೆ ಹೆದರಲಿಲ್ಲ. ನನಗೆ ಅದರ ವಿಪತ್ತು ತಟ್ಟಲೂ ಇಲ್ಲ. ಒಂದು ಸಲ—ರಾತ್ರಿಯ ನೀರವತೆಯಲ್ಲಿ ಒಂದು ಸಲ ಮಾತ್ರ, ನನ್ನನ್ನು ಮರೆತಿದ್ದ ನಿಟ್ಟುಸಿರುಗಳು ಮತ್ತೆ ಗವಾಕ್ಷದ ಕಡೆಯಿಂದ ಬಂದುವು. ಅವು ಅರ್ಥವತ್ತಾದ ಸ್ವರಗಳಾಗಿ ಪರಿಣಮಿಸಿ ಹೇಳಿದುವು : “ಶಾಂತನಾಗಿ ನಿದ್ರಿಸು. ವಿಶ್ವಕ್ಕೆಲ್ಲ ಅಧಿನಾಯಕಿಯಾಗಿ ಅದನ್ನು ಆಳುವವಳು ಪ್ರಣಯದೇವತೆ. ಪ್ರಣಯಭರದಿಂದ ಎರ್ಮನ್‌ಗಾರ್ಡಳನ್ನು ಆಲಿಂಗಿಸಿದಾಗ ನೀನು ಎಲಿಯನೋರಳಿಗೆ ಕೊಟ್ಟಿದ್ದ ಭಾಷೆಯಿಂದ ಮುಕ್ತನಾದೆ. ಇದಕ್ಕೆ ಕಾರಣ ಮುಂದೆ ಸ್ವರ್ಗದಲ್ಲಿ ತಿಳಿಯುವುದು.”

---

# ಸ್ಫಟಿಕಗಿರಿಯ ರತ್ನ

ಬಹುಕಾಲದ ಹಿಂದೆ ಕೆಲವರು ಸಾಹಸಿಗಳು ಸ್ಫಟಿಕಗಿರಿಯ ಪದ್ಮರಾಗವನ್ನು ಹುಡುಕಿ ಹುಡುಕಿ ಬೇಸತ್ತು ರಾತ್ರಿಯ ವೇಳೆಗೆ ಪ್ರಯಾಣದ ಆಯಾಸವನ್ನು ನೀಗಿ ವಿಶ್ರಾಂತಿಪಡೆಯಲು ಆ ಬೆಟ್ಟದ ತಪ್ಪಲಿಗೆ ಬಂದರು. ಅವರೆಲ್ಲರ ಉದ್ಯಮವೂ ಒಂದೇ ಆದರೂ ಅವರಲ್ಲಿ ಸ್ನೇಹಭಾವವೇನೂ ಇರಲಿಲ್ಲ. ರತ್ನವನ್ನು ಹುಡುಕಲು ಎಲ್ಲರೂ ಸಹಕರಿಸಿ ಹೊರಟವರಲ್ಲ. ಯುವಕ ದಂಪತಿಗಳಿಬ್ಬರನ್ನು ಬಿಟ್ಟರೆ ಉಳಿದವರೆಲ್ಲಾ ತಮ್ಮ ಸ್ವಾರ್ಥಕ್ಕಾಗಿ, ತಾವೊಬ್ಬರು ಮಾತ್ರ ಆ ರತ್ನವನ್ನು ದಕ್ಕಿಸಿಕೊಳ್ಳಬೇಕೆಂಬ ಲೋಭದಿಂದ, ಅಲ್ಲಿಗೆ ಬಂದವರು. ಆದರೂ ಅಲ್ಲಿ ಒಟ್ಟು ಸೇರಿದ ಮೇಲೆ ತಾವೆಲ್ಲರೂ ಒಂದು ಗುಂಪಿನವರೆಂಬ ಭಾವನೆ ಸ್ವಲ್ಪ ಮಟ್ಟಿಗೆ ಬೆಳೆಯಿತು. ಆದ್ದರಿಂದ ಎಲ್ಲರೂ ಸೇರಿ ಮರದ ಕೊಂಬೆಗಳಿಂದ ಒಂದು ದೊಡ್ಡ ಗುಡಿಸಲನ್ನು ಕಟ್ಟಿದರು. ಅಮನೂಸಕ್ ನದಿಯ ದಡದಲ್ಲಿ ಅವರು ರಾತ್ರಿಯನ್ನು ಕಳೆಯಬೇಕಾಗಿತ್ತು. ನದಿಯಲ್ಲಿ ತೇಲಿ ಬಂದಿದ್ದ ದೇವದಾರುಗಳ ಕೊಂಬೆಗಳನ್ನು ತಂದು ಪ್ರಕಾಶಮಾನವಾದ ಬೆಂಕಿಯನ್ನು ಹತ್ತಿಸಿದರು. ಅವರಲ್ಲೆಲ್ಲ ಬಹುಶಃ ಒಬ್ಬ ಮಾತ್ರ ರತ್ನಾನ್ವೇಷಣದ ಕೆಲಸದಲ್ಲಿಯೇ ತನ್ನ ಜೀವವನ್ನರೆದು ಮಾನುಷಸಹಾನುಭೂತಿಯನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದನು. ಜನವಸತಿಯೇ ಇಲ್ಲದ ಸ್ಥಳಗಳಲ್ಲಿ ಬಹುಕಾಲ ಸುತ್ತಾಡಿ ಬಂದ ಮೇಲೆ ಅಂಥ ನಿರ್ಜನಪ್ರದೇಶದಲ್ಲಿಯೂ ತನ್ನಂತೆಯೇ ಮನುಷ್ಯರಾದವರ ಮುಖ ಕಂಡೆನಲ್ಲ ಎಂಬ ಹರ್ಷ ಅವನ ಚರ್ಯೆಯಲ್ಲಾಗಲಿ ಮಾತಿನಲ್ಲಾಗಲಿ ಎಳ್ಳಷ್ಟೂ ಕಾಣಲಿಲ್ಲ. ಅವರು ಇಳಿದಿದ್ದ ಸ್ಥಳದಿಂದ ತೀರ ಹತ್ತಿರದ ಹಳ್ಳಿಗೆ ಹೋಗಬೇಕಾದರೂ ದಟ್ಟವಾಗಿಯೂ ವಿಶಾಲವಾಗಿಯೂ ಬೆಳೆದು ನಿಂತಿದ್ದ ಕಾಡುಗಳನ್ನು ದಾಟಬೇಕು. ಅವರ ಗುಡಿಸಲಿನಿಂದ ಸುಮಾರು ಒಂದು ಮೈಲಿಯಷ್ಟು ದೂರ ಹತ್ತಿದರೆ ಬೆಟ್ಟದ ನೆತ್ತಿ. ಆ ಭಾಗದಲ್ಲಿ ಪರ್ವತವು ಬೊಂತೆಬೊಂತೆಯಾದ ವನದ

ಉಡುಪನ್ನು ಕಿತ್ತೊಗೆದು ನಗ್ನವಾಗಿ ಗಗನಕ್ಕೆ ಏರಿತ್ತು. ಆಗಿಂದಾಗ ಶಿಖರಗಳ ಬಳಿ ತೇಲಿಹೋಗುವ ಮೋಡಗಳೇ ಅದಕ್ಕೆ ಆಚ್ಛಾದನ. ತಪ್ಪಲಿನ ಭೀಕರವಾದ ಕಾಡಿನಲ್ಲಿ ರಾತ್ರಿಯ ಕತ್ತಲು ಕವಿದ ಮೇಲೆ ಗಿರಿಯ ನಿರ್ಝರಿಣಿಗೂ ಬಿರುಗಾಳಿಗೂ ರುದ್ರಸಂಭಾಷಣೆ ಉಪಕ್ರಮ ವಾಗುವುದು. ಒಂಟಿಯಾಗಿ ನಿಂತು ಅದನ್ನು ಕೇಳುವುದು ಮನುಷ್ಯ ಮಾತ್ರದವನಿಗೆ ಸಾಧ್ಯವಿಲ್ಲ.

ಬಹುಶಃ ಪರಿಸ್ಥಿತಿ ಹೀಗಿದ್ದುದರಿಂದಲೇ ಆ ಗುಂಪಿನವರು ಒಬ್ಬ ರೊಡನೊಬ್ಬರು ಬೆರೆದು ಸ್ನೇಹಿತರಂತೆ ಮಾತಾಡುತ್ತಾ ಗುಡಿಸಲ ಬಳಿ ನೆರೆದರು. ಅಲ್ಲಿ ಎಲ್ಲರೂ ಯಜಮಾನರು, ಎಲ್ಲರೂ ಅತಿಥಿಗಳು. ತಾವು ಕಟ್ಟಿ ತಂದಿದ್ದ ತಿಂಡಿ ತೀರ್ಥಗಳನ್ನು ಮಟ್ಟವಾದ ಬಂಡೆಯೊಂದರ ಮೇಲಿಟ್ಟು ಎಲ್ಲರೂ ಜೊತೆಯಾಗಿ ಕುಳಿತು ಊಟ ಮಾಡಿದರು. ಬೆಳ ಗಾದ ಮೇಲೆ ಎಲ್ಲರೂ ರತ್ನವನ್ನು ಹುಡುಕಿಕೊಂಡು ಬೇರೆಬೇರೆಯಾಗಿ ತಮಗೆ ತೋರಿದ ದಾರಿಯಲ್ಲಿ ಅಲೆಯಬೇಕು; ಪುನಃ ಅಪರಿಚಿತರೇ ಆಗಬೇಕು. ಆದರೂ ಒಟ್ಟಿಗೆ ಕುಳಿತು ಊಟಮಾಡಿದ ಮೇಲೆ ಅವರಲ್ಲಿ ಸೌಹಾರ್ದ ಸ್ವಲ್ಪ ಮಟ್ಟಿಗೆ ಕುದುರಿತು. ಏಳು ಜನ ಗಂಡಸರು, ಯುವತಿ ಯೊಬ್ಬಳು–ಗುಡಿಸಲಿನಲ್ಲಿ ಹಿತವಾದ ಶಾಖವನ್ನು ಬೀರುತ್ತಿದ್ದ ಬೆಂಕಿಯ ಸುತ್ತ ಎಲ್ಲರೂ ಕುಳಿತರು. ಒಬ್ಬೊಬ್ಬನೂ ಒಂದೊಂದು ರೀತಿಯವನು. ಘಳಿಗೆ ಘಳಿಗೆಗೂ ಏರಿ ಇಳಿಯುತ್ತಿದ್ದ ಬೆಂಕಿಯ ಬೆಳಕಿನಲ್ಲಿ ಅವರ ಆಕೃತಿಗಳು ಸ್ಪಷ್ಟವಾಗದೆ ಎಲ್ಲರೂ ತಮ್ಮ ತಮ್ಮ ವಕ್ರಚಿತ್ರಗಳಂತೆ ತೋರಿದರು. ಪ್ರತಿಯೊಬ್ಬನೂ ಉಳಿದವರನ್ನು ನೋಡಿ "ಊರಿನಲ್ಲಾ ಗಲಿ ಕಾಡಿನಲ್ಲಾಗಲಿ ಇಂಥ ವಿಚಿತ್ರ ಸಭೆಯನ್ನು ಎಲ್ಲೂ ಕಂಡಿರಲಿಲ್ಲ" ಎಂದುಕೊಂಡನು.

ಅವರಲ್ಲಿ ಎಲ್ಲರಿಗಿಂತಲೂ ಹಿರಿಯನಾದವನಿಗೆ ಸುಮಾರು ಅರು ವತ್ತು ವರ್ಷ. ತೆಳ್ಳಗೆ ಎತ್ತರವಾಗಿರುವ ಆಳು. ಮಳೆ ಬಿಸಿಲೆನ್ನದೆ ಬಹು ಕಾಲ ತಿರುಗಿದ್ದರಿಂದ ಚರ್ಮ ಒರಟುಗಟ್ಟಿತ್ತು. ಜೀವಮಾನವೆಲ್ಲ ಜಿಂಕೆ, ತೋಳ, ಕರಡಿ ಮೊದಲಾದ ಮೃಗಗಳ ಸಂಗಾತಿಯಾಗಿದ್ದ ಅವನಿಗೆ ಮೃಗಗಳ ತೊಗಲೇ ಸಹಜವಾದ ಉಡುಪಾಗಿತ್ತು. ಅಮೆರಿ

ಕದ ಕೆಂಪು ಜನರು ಇಂಥ ನತದೃಷ್ಟರ ಚರಿತ್ರೆಯನ್ನು ಹೇಳುವುದುಂಟು. ಇನ್ನೂ ಹುಡುಗನಾಗಿರುವಾಗಲೇ ಅವನಿಗೆ ಪದ್ಮರಾಗದ ಹುಚ್ಚು ಹಿಡಿಯಿತು. ಅಂದಿನಿಂದ ಹಗಲಿರುಳು ಅದೇ ಕನಸು. ವರ್ಷಗಟ್ಟಲೆ ಆ ಪ್ರಾಂತದಲ್ಲೇ ಅಲೆಯುತ್ತಿದ್ದ ಅವನಿಗೆ 'ಅನ್ವೇಷಕ'ನೆಂದೇ ಹೆಸರಾಗಿ ಹೋಗಿತ್ತು; ಅವನ ನಿಜವಾದ ಹೆಸರು ಯಾರಿಗೂ ತಿಳಿಯದು. ಅವನು ಎಂದಿನಿಂದ ಪದ್ಮರಾಗದ ಯಾತ್ರೆಗೆ ತೊಡಗಿದನೋ ಅದರ ನೆನಪು ಯಾರಿಗೂ ಇಲ್ಲ. ಅವನ ಮಿತಿಮೀರಿದ ಪ್ರಲೋಭವನ್ನು ಶಿಕ್ಷಿಸಲು ದೇವರು, "ಇವನು ಸೂರ್ಯೋದಯದ ಹೊತ್ತಿಗೆ ಎದ್ದು, ದಿನವೆಲ್ಲಾ ಆಶಾಜ್ವರದಿಂದ ತಪಿಸಿ, ಸೂರ್ಯಾಸ್ತಮಯದ ಹೊತ್ತಿಗೆ ನಿರಾಶೆಯಿಂದ ಹಿಂತಿರುಗಿ ಅನಂತಕಾಲವೂ ಹೀಗೆಯೇ ಅಲೆಯುತ್ತಿರಲಿ" ಎಂದು ಶಪಿಸಿದನಂತೆ. ಈ ಕಥೆ ಸೇಕೊ ಕಣಿವೆಯಲ್ಲೆಲ್ಲಾ ಹರಡಿತ್ತು. ಈ ಅದೃಷ್ಟಹೀನನ ಮಗ್ಗುಲಲ್ಲಿ ಸ್ವಲ್ಪ ವಯಸ್ಸಾದ ಕುಳ್ಳು ಶರೀರದವನೊಬ್ಬನು ಎತ್ತರವಾದ ಟೋಪಿಯನ್ನು ಧರಿಸಿ ಕುಳಿತಿದ್ದನು. ಅವನು ಸಮುದ್ರದಾಚೆಯಿಂದ ಬಂದವನು; ಹೆಸರು ಡಾಕ್ಟರ್ ಕಾಕಾಫೊಡೆಲ್. ಅವನು ರಸಾಯನ ಶಾಸ್ತ್ರ, ಚಿನ್ನದ ತಯಾರಿಕೆ, ಮುಂತಾದ್ದರಲ್ಲಿ ಪರಿಶೋಧನೆ ನಡೆಸಿದವನು. ಸದಾ ಅಗ್ಗಿಷ್ಟಿಕೆಯ ಮುಂದೆ ಕುಳಿತು ಅನಾರೋಗ್ಯಕರವಾದ ಹವೆಯನ್ನು ಸೇವಿಸಿದ್ದರಿಂದ ಅವನ ಬಾಗಿದ ಶರೀರವು ಒಣಕಲಾಗಿತ್ತು. ನಿಷ್ಫಲವಾದ ಯಾವುದೋ ಪರಿಶೋಧನೆಯ ಸಂಬಂಧದಲ್ಲಿ ಇತರ ಉಪಕರಣಗಳ ಜೊತೆಗೆ ತನ್ನ ಶರೀರದ ರಕ್ತವನ್ನೇ ಯಥೇಚ್ಛವಾಗಿ ಬೆರಸಿ ಉಪಯೋಗಿಸಿದನೆಂದೂ ಅಂದಿನಿಂದ ಅವನು ನಿತ್ಯರೋಗಿಯಾದನೆಂದೂ ಜನರು ಹೇಳಿಕೊಳ್ಳುತ್ತಿದ್ದರು. ಅವನ ಪಕ್ಕದಲ್ಲಿದ್ದವನು ಐಕಬಾಡ್ ಪಿಗ್‌ಸ್ನೋರ್ಟ್. ಅವನು ಬಾಸ್ಟನ್ ನಗರದಲ್ಲಿ ಗಣ್ಯನಾದ ವರ್ತಕ; ಪೌರಸಭೆಯ ಸದಸ್ಯ; ನಾರ್ಟನ್ ಚರ್ಚಿನ ಹಿರಿಯ ಅಧಿಕಾರಿ. ಪ್ರತಿದಿನವೂ ಚರ್ಚಿನಲ್ಲಿ ಪ್ರಾರ್ಥನೆಯನ್ನು ಮುಗಿಸಿ ಬಂದ ಮೇಲೆ ಬೆಳಗೂ ಸಂಜೆಯೂ ಒಂದೊಂದು ಘಂಟೆಯ ಕಾಲ ತನ್ನ ಖಜಾನೆಯಲ್ಲಿ ಶೇಖರಿಸಿದ್ದ ಬೆಳ್ಳಿಯ ನಾಣ್ಯದ ರಾಶಿಯಲ್ಲೇ ಬಿದ್ದು ಹೊರಳಾಡುತ್ತಿದ್ದನೆಂದು ಅವನಿಗೆ ಆಗ

ದವರು ಆಡಿಕೊಳ್ಳುತ್ತಿದ್ದರು. ನಾಲ್ಕನೆಯ ಮನುಷ್ಯನ ಹೆಸರೇನೋ ಯಾರೂ ಅರಿಯರು. ಅವನನ್ನು ಗುರುತಿಸಬೇಕಾದರೆ ಮುಖದ ಮೇಲೆ ಬೀಡು ಬಿಟ್ಟಿದ್ದ ವಿಲಕ್ಷಣವಾದ ತಿರಸ್ಕಾರದ ನಗೆಯಿಂದ. ಸರ್ವದಾ ಅವನ ಮೂಗಿನ ಮೇಲೆ ಇರುತ್ತಿದ್ದ ದೊಡ್ಡ ಸುಲೋಚನದ ಪ್ರಭಾವ ದಿಂದ ಅವನ ಭಾಗಕ್ಕೆ ಹೊರಗಿನ ಪ್ರಪಂಚದ ಬಣ್ಣವೇ ಬದಲಾಯಿಸಿ ವಿಚಿತ್ರವಾಗಿ ಕಾಣುತ್ತಿದ್ದಿತಂತೆ. ಐದನೆಯವನಿಗೂ ಹೆಸರಿಲ್ಲ. ಅವ ನೊಬ್ಬ ಕವಿಯಾದ್ದರಿಂದ ನ್ಯಾಯವಾಗಿ ಅವನಿಗೆ ಹೆಸರಿರಬೇಕಾಗಿತ್ತು. ಜನಗಳು ಆಡಿಕೊಳ್ಳುವುದನ್ನು ನಂಬಬಹುದಾದರೆ, ಬೆಳಗಿನ ಮಬ್ಬು, ಆಕಾಶದ ಮೋಡಗಳು, ನಂಜಿಕೊಳ್ಳುವುದಕ್ಕೆ ಸಿಕ್ಕಿದಾಗ ಸ್ವಲ್ಪ ಬೆಳು ದಿಂಗಳು–ಇವೇ ಅವನ ಆಹಾರ. ಅವನ ಕಣ್ಣುಗಳಲ್ಲೇನೋ ಹೊಳಪು ಕಂಡರೂ ಇಂಥ ಅನುಪಾನದಲ್ಲಿ ಬೆಳೆದವನು ಸೊರಗಿ ಕೃಶವಾಗಿದ್ದು ದೇನೂ ಆಶ್ಚರ್ಯವಲ್ಲ. ಅವನ ಲೇಖನಿಯಿಂದ ಹೊರಬಿದ್ದ ಕಾವ್ಯಗಳ ಲ್ಲೇನೋ ಅವನ ಆಹಾರವಸ್ತುಗಳ ರುಚಿಯೇ ಕಾಣುತ್ತಿತ್ತು. ಆರ ನೆಯ ಪ್ರಯಾಣಿಕ ಉಳಿದವರ ಜೊತೆ ಸೇರದೆ ಸ್ವಲ್ಪ ದೂರದಲ್ಲಿ ಕುಳಿ ತಿದ್ದನು. ಇನ್ನೂ ಯುವಕನಾದರೂ ಮುಖದಲ್ಲಿ ಒಂದು ಬಗೆಯ ಠೀವಿ ಎದ್ದು ಕಾಣುತ್ತಿತ್ತು. ಪಕ್ಷಿಗಳ ಗರಿಗಳಿಂದ ಅಲಂಕೃತವಾದ ಎತ್ತರವಾದ ಟೋಪಿಯನ್ನು ಧರಿಸಿದ್ದನು. ಅವನ ಬೆಲೆಯುಳ್ಳ ಜರತಾರಿ ವಸ್ತ್ರಗಳು ಬೆಂಕಿಯ ಬೆಳಕಿನಲ್ಲಿ ಹೊಳೆಯುತ್ತಿದ್ದವು. ಅವನ ಹೆಸರು ಲಾರ್ಡ್ ಡಿ ವಿಯರ್. ಊರಿನಲ್ಲಿದ್ದಾಗ ಅವನು ತನ್ನ ಪೂರ್ವಜರನ್ನು ಸಮಾಧಿ ಮಾಡಿದ್ದ ಸ್ಥಳದಲ್ಲಿಯೇ ಕುಳಿತು, ಮಣ್ಣುಗೂಡಿದ ಆ ಅಸ್ಥಿಗಳನ್ನು ನೆನೆನೆನೆದು, ತನ್ನ ವಂಶದ ಘನತೆಯನ್ನೂ ಗಾಂಭೀರ್ಯವನ್ನೂ ಧ್ಯಾನಿಸುವುದರಲ್ಲೇ ಕಾಲಯಾಪನೆ ಮಾಡುವನು. ತನ್ನಲ್ಲಿಯೇ ಇದ್ದ ಹೆಮ್ಮೆ ಸಾಲದೆಂದು ತೋರಿ ಅವನು ತನ್ನ ಪೂರ್ವಿಕರೆಲ್ಲರ ಹೆಮ್ಮೆ ಯನ್ನೂ ಜೊತೆಗೆ ಸೇರಿಸಿಕೊಂಡಿರಬೇಕು.

ಕೊನೆಯಲ್ಲಿ ಹಳ್ಳಿಯ ಉಡುಪು ಧರಿಸಿದ್ದ ಸ್ಫುರದ್ರೂಪಿಯಾದ ಯುವಕ; ಅವನ ಪಕ್ಕದಲ್ಲಿ ಲಕ್ಷಣವಾದ ಯುವತಿಯೊಬ್ಬಳು. ಅವಳ ಕೆನ್ನೆಗಳಲ್ಲಿ ಕನ್ಯೆಗೆ ಸಹಜವಾದ ನಾಚಿಕೆಯ ಜೊತೆಗೆ ಪತ್ನಿಯಾದವಳ

ಗಾಢಪ್ರೇಮ ಆಗ ತಾನೇ ಸುಳಿದು ಮುಖಕ್ಕೆ ಅಪೂರ್ವವಾದ ಕಳೆ ಬಂದಿತ್ತು. ಅವರ ಹೆಸರು ಮಾಥ್ಯು ಮತ್ತು ಹೆನ್ನಾ. ಸಾಮಾನ್ಯವಾದ ಹಳ್ಳಿಯ ಹೆಸರುಗಳೇ ಆದರೂ ಅವರ ಸರಳ ಸ್ವಭಾವಕ್ಕೆ ತಕ್ಕವು. ಪದ್ಮರಾಗದ ಮಾಯೆಗೆ ಸಿಕ್ಕಿ ಬುದ್ಧಿ ಭ್ರಮೆಗೊಂಡಿದ್ದ ಆ ವಿಚಿತ್ರಸಮೂಹಕ್ಕೆ ಇವರಿಬ್ಬರೂ ಅಪವಾದವೆನ್ನುವಂತಿದ್ದರು.

ಒಂದೇ ಗುಡಿಸಲಿನ ಆಶ್ರಯದಲ್ಲಿ, ಒಂದೇ ಅಗ್ನಿಯ ಪ್ರಕಾಶದಲ್ಲಿ, ಸೇರಿದ್ದ ಆ ಜನರ ಮನೋವೃತ್ತಿ ಅಷ್ಟು ಬೇರೆಬೇರೆಯಾದರೂ ಎಲ್ಲರೂ ಒಂದೇ ಗುರಿಯನ್ನು ಸಾಧಿಸಲು ಹೊರಟವರು. ಆದ್ದರಿಂದ ಯಾವ ವಿಷಯ ಮಾತಾಡಲು ಪ್ರಾರಂಭಿಸಿದರೂ ಕೊನೆಗೆ ಅವರ ಮಾತಿನ ಮೇಲೆ ಪದ್ಮರಾಗದ ಪ್ರಭೆ ಬಿದ್ದೇ ಬೀಳುವುದು. ತಾವು ಆ ಸ್ಥಳಕ್ಕೆ ಬಂದದ್ದು ಹೇಗೆಂದು ಕೆಲವರು ವಿವರಿಸಿದರು. ಒಬ್ಬನು ದೂರದೇಶದ ಪ್ರಯಾಣಿಕನೊಬ್ಬನಿಂದ ಆ ಅನರ್ಘ್ಯರತ್ನದ ಕಥೆಯನ್ನು ಕೇಳಿದ್ದನು; ಒಡನೆಯೇ ಅದನ್ನು ನೋಡಿಯೇ ತೀರಬೇಕೆಂಬ ಮಹತ್ತಾದ ತೃಷ್ಣೆ ಉದ್ಭವಿಸಿತು. ಆ ತೃಷ್ಣೆ ಹಿಂಗಬೇಕಾದರೆ ಪದ್ಮರಾಗದ ದಿವ್ಯಜ್ಯೋತಿಯಲ್ಲಿಯೇ. ಇನ್ನೊಬ್ಬನು ಬಹಳ ಹಿಂದೆ—ಕ್ಯಾಪ್ಟನ್ ಸ್ಮಿತ್ ಅಮೆರಿಕದ ತೀರಪ್ರದೇಶಕ್ಕೆ ಬಂದ ಕಾಲದಲ್ಲಿಯೇ—ಆ ರತ್ನದ ಪ್ರಭೆಯನ್ನು ಹಡಗಿನಿಂದ ನೋಡಿದ್ದನಂತೆ; ಅಂದಿನಿಂದಾಚೆಗೆ ಅದನ್ನು ಅರಸಿಕೊಂಡು ಯಾತ್ರೆ ಹೊರಡುವವರೆಗೂ ಅವನಿಗೆ ಮನಶ್ಶಾಂತಿಯಿರಲಿಲ್ಲ. ಮತ್ತೊಬ್ಬನು ಶ್ವೇತಪರ್ವತದಿಂದ ನಲವತ್ತು ಮೈಲಿ ದೂರದಲ್ಲಿ ಬೇಟೆಯಾಡುತ್ತಿದ್ದನು. ಕಾಡಿನಲ್ಲೇ ಮಲಗಿದ್ದು ಅರ್ಧರಾತ್ರಿಯಲ್ಲಿ ಎಚ್ಚರವಾದಾಗ ಅವನಿಗೆ ಆ ರತ್ನ ಕಾಣಿಸಿತಂತೆ. ಉಲ್ಕಾಪಾತದ ಜ್ವಾಲೆಯಂತೆ ಹೊಳೆಯುತ್ತಿದ್ದ ಅದರ ಹೊಳಪಿಗೆ ಮರಗಳೆಲ್ಲ ನೆರಳುಹಾಕುತ್ತಿದ್ದುವಂತೆ. ಅದು ಇದ್ದ ಸ್ಥಳವನ್ನು ತಲಪಬೇಕೆಂದು ಲೆಕ್ಕವಿಲ್ಲದಷ್ಟು ಪ್ರಯತ್ನಗಳು ನಡೆದಿದ್ದವು. ಪೂರ್ಣಚಂದ್ರನನ್ನು ಹಿಂದೂಡಿ ಸೂರ್ಯನನ್ನೇ ಸರಿಗಟ್ಟಿ ನಿಲ್ಲುವಂಥ ಆ ರತ್ನವನ್ನು ಹುಡುಕುವುದು ಸುಲಭವೇ ಇರಬೇಕು. ಆದರೂ—ಯಾವ ದೈವದ ಶಾಪದಿಂದಲೋ—ಯಾರೊಬ್ಬರ ಪ್ರಯತ್ನವೂ ಸಫಲವಾಗಿರಲಿಲ್ಲ. ಅಂದು ಆ ಗುಂಪಿನಲ್ಲಿ ಪ್ರತಿಯೊಬ್ಬರೂ

ಉಳಿದವರನ್ನು ನೋಡಿ " ಎಷ್ಟೋಂದು ಜನ ವಿಫಲರಾಗಿ ಹಿಂತಿರುಗಿರುವಾಗ ಇವರು ಮಾತ್ರ ರತ್ನ ತಮಗೆ ಸಿಕ್ಕುವುದೆಂಬ ಆಸೆಯಿಟ್ಟುಕೊಂಡಿರುವರಲ್ಲ, ಇದೇನು ಮರುಳು!" ಎಂದು ನಗುವವರೇ. ಆದರೆ ಹಾಗೆ ನಗುವವರಿಗೂ ಸಹ ರತ್ನ ತಮಗೇ ಸಿಕ್ಕುವುದೆಂಬ ದೃಢನಂಬಿಕೆ. ಯಾವನೋ ಯಕ್ಷ ಆದರ ಕಾವಲಿಗಾಗಿ ನಿಂತಿರುವನೆಂದೂ, ಅದನ್ನು ಶಿಖರದಿಂದ ಶಿಖರಕ್ಕೆ ಕೊಂಡೊಯ್ದು, ಇಲ್ಲವೆ ಮಾಯಾಸರೋವರದ ಮೇಲಿದ್ದ ಅದರ ನಿವಾಸವನ್ನು ಮಂಜಿನಿಂದ ಮುಸುಕಿ, ಹುಡುಕಬಂದವರನ್ನು ಮರುಳುಮಾಡುವನೆಂದೂ ಕೆಂಪುಜನರು ಕಥೆ ಹೇಳುವರು. ಆ ಕಥೆ ನೆನಪಿಗೆ ಬಂದರೂ " ಅದು ನಂಬಲರ್ಹವಲ್ಲ. ಬೆಟ್ಟ, ಕಾಡು, ನದಿ ಮುಂತಾದುವು ಇದ್ದ ಕಡೆ ಪ್ರಯಾಣಕ್ಕೆ ಅಡಚಣೆಯಿದ್ದೇ ಇರುತ್ತದೆ. ಇದುವರೆಗೂ ರತ್ನವನ್ನು ಅರಸಿದವರು ದಕ್ಷರಲ್ಲ, ಪಟ್ಟು ಹಿಡಿದು ನಿಲ್ಲುವ ಶಕ್ತಿಯೂ ಇಲ್ಲ" ಎಂದು ತಮಗೆ ತಾವೇ ಧೈರ್ಯ ಹೇಳಿಕೊಂಡರು.

ಅವರ ಮಾತು ಕಡಿಮೆಯಾಗುತ್ತಾ ಬಂದಾಗ ಸುಲೋಚನ ಧರಿಸಿದ್ದವನು ತನ್ನ ಮುಖದ ಮೇಲೆ ನೆಲಸಿದ್ದ ತೆಗಳು ನಗೆಯನ್ನು ಎಲ್ಲರ ಮೇಲೆಯೂ ಚೆಲ್ಲಿ ಹೇಳಿದನು:

" ಏನು ಯಾತ್ರಿಕರೆ, ನಾವು ಏಳು ಜನ ಜ್ಞಾನಿಗಳು, ಒಬ್ಬ ಸುಂದರಯುವತಿ–ಆಕೆಯೂ ಕೂಡ ಗಡ್ಡ ನರೆತ ನಮ್ಮ ಸ್ನೇಹಿತರಂತೆಯೇ ಜ್ಞಾನಿಯಿರಬೇಕು–ಎಲ್ಲಾ ಒಂದೇ ಉದ್ದೇಶದಿಂದ ಇಲ್ಲಿ ಬಂದುನೆರೆದಿದ್ದೇವೆ. ಪದ್ಮರಾಗ ನಮ್ಮಲ್ಲಿಯೇ ಒಬ್ಬರಿಗೆ ಕರಗತವಾಗುವುದೆಂದು ಭಾವಿಸೋಣ. ಸಿಕ್ಕಿದರೆ ಅದರಿಂದ ಏನು ಪ್ರಯೋಜನ ಪಡೆಯಬೇಕೆಂದಿದ್ದೇವೆ? ತಿಳಿದುಕೊಳ್ಳಬೇಕಲ್ಲವೆ? ನಮ್ಮ ಕರಡಿಯ ಚರ್ಮದ ಮಿತ್ರರು ಇಲ್ಲೇ ಇದ್ದಾರೆ. ಅಪ್ಪಣೆಕೊಡಿಸುತ್ತೀರಾ ಸ್ವಾಮಿ? ನೀವು ಬಹುಕಾಲದಿಂದ ಹುಡುಕುತ್ತಿರುವ ರತ್ನ ಲಭಿಸಿದರೆ ಅದರಿಂದ ಹೇಗೆ ಸುಖಪಡಬೇಕೆಂದಿದ್ದೀರಿ?"

" ಸುಖವೆ? ಅದರಿಂದ ಯಾವ ಸುಖ ಪಡೆಯುವ ಆಸೆಯೂ ಇಲ್ಲ. ಆ ಹುಚ್ಚು ಎಂದೋ ಬಿಟ್ಟುಹೋಯಿತು. ಹಾಗಾದರೆ ಅದನ್ನು ಹುಡುಕುವುದೇಕೆ ಎನ್ನುವಿರಿ. ಹುಡುಗತನದಲ್ಲಿ ಪ್ರಾರಂಭವಾದ ಆ

ಬಯಕೆ ವೃದ್ಧಾಪ್ಯದಲ್ಲಿ ಶಾಪವಾಗಿ ಪರಿಣಮಿಸಿದೆ. ಈ ರತ್ನಾನ್ವೇಷಣವೇ ನನ್ನ ಜೀವದ ಚೈತನ್ಯ; ಆತ್ಮದ ಶಕ್ತಿ; ಪ್ರತಿಯೊಂದು ಎಲುಬಿನ ಸಾರ. ಅನ್ವೇಷಣವನ್ನು ಬಿಟ್ಟು ನಾನೇನಾದರೂ ಹಿಂದಿರುಗಿದರೆ ಈ ಪರ್ವತದ ದ್ವಾರಪ್ರದೇಶದಲ್ಲೇ ನನ್ನ ಘಟ ಉರುಳುವುದು. ದುರ್ವಿನಿಯೋಗವಾದ ನನ್ನ ಯೌವನವೇನಾದರೂ ಮತ್ತೆ ದೊರೆತರೆ ಅದನ್ನು ಪುನಃ ಈ ರತ್ನಾನ್ವೇಷಣೆಯಲ್ಲೇ ವಿನಿಯೋಗಿಸುವೆನು. ಆ ಹಂಬಲನ್ನು ಬಿಡಲಾರೆ. ಪದ್ಮರಾಗವು ಕೈವಶವಾದ ಮೇಲೆ, ನನ್ನ ಗುಹೆಗೆ ತೆಗೆದುಕೊಂಡು ಹೋಗಿ ಅದನ್ನು ಎದೆಗೆ ಅಪ್ಪಿಕೊಂಡು ಪ್ರಾಣ ಬಿಡುತ್ತೇನೆ. ಆ ರತ್ನ ನನ್ನೊಡನೆಯೇ ಸಮಾಧಿಯಾಗಬೇಕು."

ಅವನ ಮಾತನ್ನು ಕೇಳಿ ಕಾಕಾಫ್ಲೊಡೆಲ್ ಉರಿದುಬಿದ್ದನು. "ರತ್ನ ಇವನೊಡನೆ ಸಮಾಧಿಯಾಗಬೇಕಂತೆ! ಇದೇನು ಹುಚ್ಚು! ವಿಜ್ಞಾನದ ಮೇಲಿನ ಅಭಿಮಾನವಾದರೂ ಬೇಡವೆ? ಪ್ರಕೃತಿದೇವಿ ತನ್ನ ಪ್ರಯೋಗ ಶಾಲೆಯಲ್ಲಿ ಎಂಥ ಅಮೋಘವಾದ ರತ್ನವನ್ನು ಸೃಷ್ಟಿಸಿದ್ದಾಳೆ—ಅದರ ಬೆಳಕನ್ನು ಸಾವಿರ ಮೈಲಿ ದೂರದಿಂದ ದಿಟ್ಟಿಸುವ ಯೋಗ್ಯತೆಯೂ ನಿನಗಿಲ್ಲ. ಜ್ಞಾನಿಯಾದವನು ಅದನ್ನು ಬಯಸುವುದು ಒಂದೇ ಒಂದು ಉದ್ದೇಶದಿಂದ. ನಾನು ಅದನ್ನು ಸಂಪಾದಿಸಿದೊಡನೆ—ಅದು ನನಗೇ ದೊರಕುತ್ತದೆ; ನನ್ನ ವಿಜ್ಞಾನ ಸಂಪತ್ತಿನ ಧವಳಕೀರ್ತಿಗೆ ಕಲಶವಿಡಲೆಂದೇ ಅದು ಸೃಷ್ಟಿಯಾಗಿರಬೇಕೆಂದು ಒಳದನಿಯೊಂದು ಹೇಳುತ್ತದೆ—ಯೂರೋಪಿಗೆ ತೆಗೆದುಕೊಂಡುಹೋಗಿ ಅದರಲ್ಲಿರುವ ಮೂಲಾಂಶಗಳನ್ನೆಲ್ಲಾ ವಿಭಜನೆಮಾಡುವುದರಲ್ಲೇ ನನ್ನ ಜೀವನವನ್ನು ಕಳೆಯುತ್ತೇನೆ. ರತ್ನದ ಒಂದು ಚೂರನ್ನು ಅರೆದು ನುಣುಪಾಗಿ ಪುಡಿಮಾಡುತ್ತೇನೆ. ಇನ್ನೊಂದು ಚೂರನ್ನು ಅದರೊಡನೆ ಸುಲಭವಾಗಿ ಬೆರೆಯುವ ದ್ರಾವಣದಲ್ಲಿಡುತ್ತೇನೆ. ಈ ಪ್ರಯೋಗಗಳನ್ನು ನಡೆಸಿ, ರತ್ನವನ್ನು ವಿಭಜನೆ ಮಾಡಿ, ಪರಿಶೋಧನೆಯ ಫಲಿತಾಂಶಗಳನ್ನು ಕೂಡಿಸಿ, ದೊಡ್ಡದೊಂದು ಗ್ರಂಥ ಬರೆದು ಪ್ರಪಂಚಕ್ಕೆ ದಾನಮಾಡುತೇನೆ.''

" ಒಪ್ಪಿದೆ ಸ್ವಾಮಿ, ಘನವಾದ ಉದ್ದೇಶ!" ಕನ್ನಡಕದ ತೆಗಳುಗಾರ ನಡುವೆ ಮಾತುಹಾಕಿದ. " ನಿಮ್ಮ ಪ್ರಯೋಗದಲ್ಲಿ ರತ್ನವೇನೋ

ನಾಶವಾಗುತ್ತದೆ. ಆದರೆ ಅದಕ್ಕಾಗಿ ಚಿಂತಿಸಬೇಕಾದದ್ದಿಲ್ಲ. ನಿಮ್ಮ ಅಮೂಲ್ಯ ಗ್ರಂಥವನ್ನು ಓದಿದ ಮೇಲೆ ಯಾವ ನಾಡಾಡಿಯಾದರೂ ಅದೇ ರತ್ನವನ್ನು ಪುನಃ ಸೃಷ್ಟಿಸಬಹುದಲ್ಲವೆ!"

ಐಕಬಾಡ್ ಪಿಗ್‌ಸ್ನೋರ್ಟ್ಸನಿಗೆ ಇದು ಸರಿಬೀಳಲಿಲ್ಲ.

"ಇದ್ದುದನ್ನು ಇದ್ದಹಾಗೆಯೇ ಹೇಳುತ್ತೇನೆ, ನೋಡಿ—ಖೋಟಾ ರತ್ನಗಳನ್ನು ತಯಾರುಮಾಡುವುದು ನ್ಯಾಯವಲ್ಲವೆಂದು ನನ್ನ ಅಭಿಪ್ರಾಯ. ಅದರಿಂದ ಅಪ್ಪಟ ರತ್ನಗಳ ಬೆಲೆ ಇಳಿದುಹೋಗುತ್ತದೆ. ನನ್ನ ದೃಷ್ಟಿಯಲ್ಲಿ ಪೇಟೆಯ ಧಾರಣೆ ಇಳಿಯದಂತೆ ನೋಡಿಕೊಳ್ಳುವುದು ಮುಖ್ಯಾಂಶ. ನನ್ನ ಉದ್ದೇಶವನ್ನೇನೂ ಮರೆಮಾಚಬೇಕಾದ್ದಿಲ್ಲ. ನನ್ನ ಗಡಂಗುಗಳನೆಲ್ಲಾ ಗುಮಾಸ್ತರ ವಶಕ್ಕೆ ಬಿಟ್ಟು, ವ್ಯಾಪಾರವನ್ನೆಲ್ಲಾ ಮರೆತು ಇಲ್ಲಿಗೆ ಬಂದಿದ್ದೇನೆ. ಅಂದ ಮೇಲೆ ನನ್ನ ಗಿರಾಕಿಗಳೆಲ್ಲಾ ಬೇರೆಯವರ ಪಾಲಾಗಬಹುದು. ಅಲ್ಲದೆ ಇಲ್ಲಿಯ ಕಾಡುಜನರ ಕೈಗೆ ಸಿಕ್ಕಿ ನನ್ನ ಪ್ರಾಣಕ್ಕೇ ಸಂಚಕಾರ ಬಂದರೂ ಬರಬಹುದು . . . . ನಾನು ಪ್ರಯಾಣ ಹೊರಡುವುದಕ್ಕೆ ಮುಂಚೆ ದೇವರ ಪ್ರಾರ್ಥನೆಗೆ ಸಹ ಸಮಯವಿರಲಿಲ್ಲ. ಈ ರತ್ನಾನ್ವೇಷಣೆಯ ಕೆಲಸ ಸೈತಾನನಿಂದ ಪ್ರೇರಿತವಾದದ್ದೆಂದೇ ಕೆಲವರ ಅಭಿಮತ. ಹೀಗೆ ನನ್ನ ದೇಹವನ್ನೂ ಆತ್ಮವನ್ನೂ ಧನವನ್ನೂ ಅಪಾಯಕ್ಕೀಡುಮಾಡಿ ಬಂದದ್ದೇಕೆ? ಲಾಭದ ಆಸೆಯಿಲ್ಲದಿದ್ದರೆ ಹೀಗೆ ಮಾಡುತ್ತಿದ್ದೆನೆ!"

"ಎಲ್ಲಾದರೂ ಉಂಟೆ ಸ್ವಾಮಿ! ತಮ್ಮ ವಿಷಯದಲ್ಲಿ ಅಂಥ ಅನ್ಯಾಯವನ್ನಾಡಿದರೆ, ನಾಲಿಗೆಯನ್ನು ಸೀಳಿ ಉಪ್ಪು ತುಂಬಬೇಕು" ಎಂದ, ಕನ್ನಡಕದ ತೆಗಳುಗಾರ.

"ಅಲ್ಲವೆ? ಈ ರತ್ನವಿದೆಯಲ್ಲ, ಅದನ್ನು ನಾನು ಕಣ್ಣಿಂದ ನೋಡಿಲ್ಲವೆಂದು ಒಪ್ಪುತ್ತೇನೆ. ಆದರೆ ಅದು ಜನಗಳು ಹೇಳುವುದರಲ್ಲಿ ಮೂರರಲ್ಲೊಂದು ಪಾಲು ಪ್ರಕಾಶಮಾನವಾಗಿದ್ದರೂ ಕೂಡ ಅದರ ಬೆಲೆ ಮೊಗಲ ಚಕ್ರವರ್ತಿಯ ಕಿರೀಟಮಣಿಗಿಂತಲೂ ಹೆಚ್ಚಾಗಿರಬೇಕು. ಆದ್ದರಿಂದ ನನ್ನ ಉದ್ದೇಶವೇನೆಂದರೆ, ಈ ರತ್ನವನ್ನು ಹಡಗಿನ ಮೇಲೆ ತೆಗೆದುಕೊಂಡು ಹೋಗಿ, ಇಂಗ್ಲೆಡ್, ಫ್ರಾನ್ಸ್, ಸ್ಪೇಯ್ನ್, ಇಟಲಿ, ಅಥವಾ

ದೇವರ ಇಚ್ಛೆ ಹಾಗಿದ್ದರೆ, ಯಾವುದಾದರೂ ಪರಮಶ್ರೀಯರ ರಾಜ್ಯ–ಎಲ್ಲಾದರೂ ಸರಿಯೆ, ಯಾವ ರಾಜ ಹೆಚ್ಚು ಬೆಲೆ ಕೊಡುತ್ತಾನೋ ಅವನಿಗೆ ಮಾರುವುದು. ಆತನ ಕಿರೀಟದ ಮಣಿಗಳ ಜೊತೆಗೆ ಇದು ನಾಯಕ ಮಣಿಯಾಗಿ ತೊಳಗಲಿ! ಇದಕ್ಕಿಂತ ಒಳ್ಳೆಯ ಯೋಚನೆ ನಿಮ್ಮಲ್ಲಿ ಯಾರಿಗಾದರೂ ಹೊಳೆದರೆ ನನಗೂ ತಿಳಿಸಿ."

ಕವಿಯ ಮುಖ ಕೋಪದಿಂದ ಕೆಂಡವಾಯಿತು.

" ಅಯ್ಯೋ, ಎಂಥ ಕ್ಷುದ್ರಜೀವಿಗಳಿವರು! ಇಷ್ಟು ತುಚ್ಛವಾದ ಆಸೆಯುಂಟೆ! ನೀನು ಬಿದ್ದು ಹೊರಳುವ ಕೆಸರಿಗೆ ಈ ರತ್ನವನ್ನೂ ಕೊಂಡೊಯ್ದು ಅದರ ಸ್ವರ್ಗೀಯ ಜ್ಯೋತಿಯನ್ನು ಮಣ್ಣುಮಾಡ ಬೇಕೆ! ನಾನು ಸರ್ವಥಾ ಇದಕ್ಕೆ ಒಪ್ಪಲಾರೆ. ಲಂಡನ್ನಿನ ಓಣಿಯೊಂದರಲ್ಲಿ ನನ್ನ ಕೊಠಡಿಯಿದೆ. ರತ್ನವನ್ನು ನನ್ನ ಅಂಗಿಯೊಳಗೆ ಬಚ್ಚಿಟ್ಟು ಅಲ್ಲಿಗೆ ತೆಗೆದುಕೊಂಡು ಹೋಗಿ ಹಗಲು ರಾತ್ರಿ ಅದನ್ನು ಕಣ್ಣು ತುಂಬ ನೋಡಿ ಆತ್ಮ ತಣಿಯುವವರೆಗೂ ಆ ತೇಜಸ್ಸನ್ನು ಪಾನಮಾಡುತ್ತೇನೆ. ಆ ಜ್ಯೋತಿ ಹೃದಯದ ಸಂದುಸಂದಿನಲ್ಲಿಯೂ ವ್ಯಾಪಿಸಿ ನನ್ನ ಲೇಖನಿಯಿಂದ ಹೊರಡುವ ಕಾವ್ಯವಾಹಿನಿಯ ಅಲೆಯಲೆಯಲ್ಲಿಯೂ ಮಿನುಗುತ್ತಿರಲಿ. ನಾನು ವಿಧಿವಿಶನಾಗಿ ಸಾವಿರ ವರ್ಷ ಕಳೆದರೂ ನನ್ನ ಹೆಸರಿನ ಸುತ್ತ ಈ ಮಹಾರತ್ನದ ಪ್ರಭಾವಳಿಯಿರುತ್ತದೆ.

ಕನ್ನಡಕದವನು ಹುಸಿನಗೆ ನಕ್ಕನು.

" ಭೇಷ್, ಕವಿವರ್ಯರೆ! ಉದ್ದೇಶವೇನೋ ಒಳ್ಳೆಯದೇ. ಆದರೆ ನಿಮ್ಮ ಅಂಗಿಯಲ್ಲಿ ಅದನ್ನು ಬಚ್ಚಿಟ್ಟರೆ ಸ್ವಲ್ಪ ತೊಂದರೆಯಾಗಬಹುದು. ಅದರಲ್ಲಿರುವ ರಂಧ್ರಗಳ ಮೂಲಕ ರತ್ನದ ಬೆಳಕನ್ನು ಕಂಡು ನಿಮ್ಮನ್ನು ನೋಡಿದ ಜನರೆಲ್ಲ ಕೊಳ್ಳಿಯ ದೆವ್ವ ಬಂತೆಂದು ಹೆದರ ಬಹುದು, ಜೋಕೆ.''

ಶ್ರೀಮಂತರಾದ ಲಾರ್ಡ್ ಡಿ ವಿಯರ್ ಇನ್ನೊಬ್ಬರೊಡನೆ ಮಾತಾಡುವವರಲ್ಲ. ಅಲ್ಲಿದ್ದವರಲ್ಲಿ ಯಾರೂ ಸಂಭಾಷಣೆಗೆ ಅರ್ಹರಲ್ಲವೆಂದು ಅವರ ನಂಬಿಕೆ. ಆದ್ದರಿಂದ ತಮಗೆ ತಾವೇ ಮಾತಾಡಿಕೊಂಡರು.

" ತೊಡುವುದಕ್ಕೆ ಹರಕುಚಿಂದಿ ಸಿಕ್ಕುವುದೇ ಕಷ್ಟವಾಗಿರುವ ಈ

ಪ್ರಾಣಿ ಪದ್ಮರಾಗದಂಥ ದಿವ್ಯ ರತ್ನವನ್ನು ತನ್ನ ಕಸದ ಕೋಣೆಗೆ ಒಯ್ಯಬೇಕಂತೆ! ನಮಗೆ ಆನುವಂಶೀಯವಾಗಿ ಬಂದ ಪ್ರಾಸಾದದ ಸಭಾಂಗಣವನ್ನು ಬೆಳಗುವುದೇ ಈ ರತ್ನದ ಕರ್ತವ್ಯವೆಂದು ನಾನು ಹಿಂದೆಯೇ ನಿರ್ಧರಿಸಿದ್ದೇನೆ. ನಮ್ಮ ಪ್ರಾಸಾದದ ಗೋಡೆಗಳನ್ನಲಂಕರಿಸಿರುವ ಪುರಾತನ ಆಯುಧಗಳ ಮೇಲೂ ಲೋಹಕವಚಗಳ ಮೇಲೂ ಧ್ವಜಲಾಂಛನಗಳ ಮೇಲೂ ಈ ರತ್ನವು ತನ್ನ ಕಿರಣಗಳನ್ನು ಬೀರಿ, ನಡುರಾತ್ರಿಯ ಕತ್ತಲಿಗೂ ಹಗಲಿನ ಕಾಂತಿಯನ್ನು ಕೊಟ್ಟು, ನಮ್ಮ ವೀರಪೂರ್ವಜರ ನೆನಪು ಅಚ್ಚಳಿಯದಂತೆ ರಕ್ಷಿಸಬೇಕು. ಎಷ್ಟೋ ಜನ ಸಾಹಸಿಗಳ ಪ್ರಯತ್ನಕ್ಕೂ ಅದು ಲಭ್ಯವಾಗಲಿಲ್ಲವೆಂದಮೇಲೆ, ನಮ್ಮ ವಂಶದ ಮಹಿಮೆಗೆ ಭೂಷಣವಾಗಿ ಉಳಿಯಲೆಂದೇ ಆ ರತ್ನವನ್ನು ದೈವ ಕಾದಿಟ್ಟಿರಬೇಕು. ನಮ್ಮ ಅರಮನೆಯಲ್ಲಿ ಅದಕ್ಕೆ ಸಲ್ಲುವ ಸನ್ಮಾನ ಈ ಸ್ಫಟಿಕಗಿರಿಯಲ್ಲಿ ದೊರೆತೀತೆ!"

ತೆಗಳುಗಾರನು ವ್ಯಂಗ್ಯ ಮರ್ಯಾದೆಯಿಂದ ಶ್ರೀಮಂತರಿಗೆ ಕೈಮುಗಿದ.

"ತಮ್ಮ ಘನತೆಗೆ ಒಪ್ಪುವಂಥ ಮಾತು, ಶ್ರೀಮಂತರೆ! ಆದರೂ, ತಮ್ಮ ಕ್ಷಮೆಯನ್ನು ಬೇಡಿ ಒಂದು ಸಲಹೆಯನ್ನು ಅವಗಾಹನೆಗೆ ತರುವ ದಿಟ್ಟತನಕ್ಕೆ ಕೈಹಾಕಲೆ? ಈ ರತ್ನವನ್ನು ಸಭಾಂಗಣದಲ್ಲಿಡುವ ಬದಲು ತಮ್ಮ ಪೂರ್ವಜರು ಅಂತ್ಯವಿಶ್ರಾಂತಿಪಡೆಯುತ್ತಿರುವ ಸಮಾಧಿಯ ನೆಲಮಾಳಿಗೆಯಲ್ಲಿಟ್ಟರೆ ತಮ್ಮ ಘನತೆಗೆ ಮತ್ತಷ್ಟು ಮೆರುಗು ಬರಬಹುದಲ್ಲವೆ?"

ಹೆಂಡತಿಯ ಕೈಹಿಡಿದು ಕುಳಿತಿದ್ದ ವ್ಯಾಧ್ಯು ನಡುವೆ ಮಾತು ಹಾಕಿದನು.

"ಛೇ, ಹಾಗೆನ್ನಬಾರದು ಶ್ರೀಮಂತರ ಉದ್ದೇಶ ಶ್ಲಾಘ್ಯವಾದದ್ದೆಂದೇ ನನಗೂ ತೋರುತ್ತದೆ. ನಾನೂ ಹೆನ್ನಳೂ ರತ್ನವನ್ನು ಹುಡುಕುತ್ತಿರುವುದು ಅದೇ ಉದ್ದೇಶದಿಂದ."

ಶ್ರೀಮಂತರಿಗೆ ಆಶ್ಚರ್ಯದಿಂದ ತಮ್ಮ ಘನತೆ ಕ್ಷಣಕಾಲ ಮರೆತು ಹೋಯಿತು; ವ್ಯಾಧ್ಯುವಿನೊಡನೆ ಮಾತಾಡಿಯೇ ಬಿಟ್ಟರು.

" ಅಲ್ಲವೋ ಹುಂಬ, ರತ್ನವನ್ನಿಡುವಂಥ ಅರಮನೆ ನಿನಗೆಲ್ಲಿ ಬಂತೋ ? ''

" ಅರಮನೆಯೇನೋ ಇಲ್ಲ. ಆದರೆ ನಮ್ಮ ಪುಟ್ಟ ಗುಡಿಸಲಿನಂಥ ಅಣಿಯಾದ ಮನೆ ಧವಳಗಿರಿಯ ತಪ್ಪಲಿನಲ್ಲಿ ಮತ್ತೆಲ್ಲಿಯೂ ಸಿಕ್ಕ ಲಾರದು. ನನಗೂ ಹೆನ್ನಳಿಗೂ ಮದುವೆಯಾಗಿ ಒಂದು ವಾರವಾಯಿತು. ಚಳಿಗಾಲದ ರಾತ್ರಿಯಲ್ಲಿ ಮನೆ ಬೆಳಕಾಗಿರಲೆಂದು ನಾವು ಈ ರತ್ನ ಸಂಪಾದನೆಗೆ ಹೊರಟಿದ್ದೇವೆ. ಅಲ್ಲದೆ ನೆರೆಹೊರೆಯವರು ಮನೆಗೆ ಬಂದಾಗ ಅವರಿಗೆ ರತ್ನವನ್ನು ತೋರಿಸಿದರೆ ಎಷ್ಟು ಚೆನ್ನಾಗಿರುತ್ತದೆ! ಅದರ ಬೆಳಕಿನಲ್ಲಿ ಮೂಲೆಯಲ್ಲಿ ಬಿದ್ದಿರುವ ಸಣ್ಣ ಸೂಜಿಯಾದರೂ ಕಂಡೀತು! ಕಿಟಕಿಯ ಮೂಲಕ ಅದರ ಬೆಳಕು ಹೊರಟು ಬಹುದೂರದ ವರೆಗೂ ನಮ್ಮ ಮನೆ ಕಾಣುತ್ತದೆ. ಆಮೇಲೆ, . . . . ಆಮೇಲೆ, ನಡು ರಾತ್ರಿಯಲ್ಲಿ ನಾವು ಎಚ್ಚರಗೊಂಡರೆ, ಅದರ ಬೆಳಕಿನಲ್ಲಿ ಒಬ್ಬರ ಮುಖ ವನ್ನೊಬ್ಬರು ನೋಡಬಹುದು. ಆ ಸಂತೋಷವೊಂದೇ ಸಾಲದೆ ! "

ಆ ತರುಣ ದಂಪತಿಗಳ ಸರಳ ಸ್ವಭಾವವನ್ನೂ ಕೃತ್ರಿಮರಹಿತ ವಾದ ಬಯಕೆಯನ್ನೂ ನೋಡಿ ಎಲ್ಲರ ಮುಖದಲ್ಲಿಯೂ ಮುಗುಳುನಗೆ ಹರಿಯಿತು. ಆ ಮಹಾರತ್ನ ಕೈವಶವಾದರೆ ಭೂಮಂಡಲವನ್ನು ಏಕ ಚ್ಛತ್ರಾಧಿಪತಿಯಾಗಿ ಆಳುವವನೂ ಸಹ ಹೆಮ್ಮೆಪಡಬಹುದು ಹೀಗಿರು ವಾಗ ಈ ಹಳ್ಳಿಯವರ ಮನೋವೃತ್ತಿ ಎಷ್ಟು ಮುಗ್ಧವಾಗಿ ಕಾಣಬೇಕು! ಅದುವರೆಗೂ ಎಲ್ಲರನ್ನೂ ಗೇಲಿಮಾಡುತ್ತಿದ್ದ ತೆಗಳುಗಾರನ ಮುಖ ವಂತೂ ತಿರಸ್ಕಾರದಿಂದ ಬಿರಿಯುವಂತಾಯಿತು. ಮ್ಯಾಥ್ಯು ಅದನ್ನು ನೋಡಿ ಸ್ವಲ್ಪ ಅಸಮಾಧಾನಗೊಂಡು, " ಹಾಗಾದರೆ ಪದ್ಮರಾಗವನ್ನಿ ಟ್ಟುಕೊಂಡು ನೀವೇನು ಮಾಡುತ್ತೀರಿ, ಹೇಳಬಾರದೆ ? '' ಎಂದನು.

" ಪದ್ಮರಾಗವೆ? ಅಯ್ಯೋ ಮೂರ್ಖ ! ಸೃಷ್ಟಿಯಲ್ಲಿ ಅಂಥ ರತ್ನ ವಿರುವುದೇ ಸುಳ್ಳು. ಇದನ್ನು ಸ್ಪಷ್ಟಮಾಡಿಕೊಡುವುದಕ್ಕೇ ನಾನು ಮೂರು ಸಾವಿರ ಮೈಲಿ ಪ್ರಯಾಣಮಾಡಿ ಇಲ್ಲಿ ಒಂದೊಂದು ಶಿಖರ ವನ್ನೂ ಹತ್ತಿ ಒಂದೊಂದು ಕಮರಿಗೂ ಇಳಿದು ಶ್ರಮಪಟ್ಟಿದ್ದೇನೆ. ನಿನ್ನಂತೆ ಕತ್ತೆಗಳಲ್ಲದವರು ಯಾರಾದರೂ ಸಿಕ್ಕಿದರೆ ತಿಳಿಯಹೇಳು

ತ್ತೇನೆ, ಈ ಪದ್ಮರಾಗ ಮಿಥ್ಯವೆಂದು."

ಪದ್ಮರಾಗವನ್ನು ಅರಸಿ ಬಂದವರಲ್ಲಿ ಮುಕ್ಕಾಲುಪಾಲು ಜನ ನಿಷ್ಪ್ರಯೋಜಕವಾದ ಹುಚ್ಚು ಬಯಕೆಗಳಿಗೆ ಮನಸೋತವರೇ. ಆದರೆ ಆ ತೆಗಳುಗಾರನಂಥ ದುರ್ಬುದ್ಧಿಗಳು—ಅಧರ್ಮಿಗಳೆಂದರೂ ಎನ್ನ ಬಹುದು—ಮತ್ತೆ ಯಾರೂ ಇರಲಿಲ್ಲ ಅವನ ಮನಸ್ಸಿನ ಯೋಚನೆ ಗಳೆಲ್ಲಾ ಪಾತಾಳದ ತಮಸ್ಸಿನ ಕಡೆಗೆ ಹರಿಯುವುವೇ ಹೊರತು ಒಂದು ಸಲವಾದರೂ ಸ್ವರ್ಗದ ಬೆಳಕಿನ ಕಡೆಗೆ ತಿರುಗಲೊಲ್ಲವು. ಭಗ ವಂತನು ನಮಗಾಗಿ ಸೃಷ್ಟಿಸಿರುವ ಜ್ಯೋತಿಗಳೆಲ್ಲವನ್ನೂ ನಾಶಮಾಡಿ ಜಗತ್ತನ್ನೆಲ್ಲ ಅಂಧಕಾರಮಯವಾಗಿ ಮಾಡಲು ಸಾಧ್ಯವಿದ್ದರೆ ಆ ಕೆಲಸ ವನ್ನು ಅವನು ಹೆಮ್ಮೆಯಿಂದ ನಿರ್ವಹಿಸುತ್ತಿದ್ದನು. ಅವನ ಜರಿಕೆಯ ಮಾತು ಮುಗಿಯುವುದರೊಳಗೆ ಅಂತರಿಕ್ಷದಲ್ಲಿ ದೊಡ್ಡ ಉರಿಯೆದ್ದಂ ತಾಗಿ ಮೋಡಗಳೆಲ್ಲಾ ಕೆಂಪಾದವು. ಸುತ್ತಲಿನ ಬೆಟ್ಟಗಳು, ಬಂಡೆಗಳ ಮೇಲೆ ರೋಷದಿಂದ ಉರುಳುತ್ತಿದ್ದ ನದಿ, ಕಾಡುಮರಗಳ ಕಾಂಡಗಳು —ಎಲ್ಲವೂ ಆ ಬೆಳಕಿನಲ್ಲಿ ತೊಯ್ದುವು ಗುಡುಗು ಸಹ ಬರಬಹುದೆಂದು ಯಾತ್ರಿಕರೆಲ್ಲರೂ ಹೆದರಿದರು. ಆದರೆ ಅದು ಕೇಳಿಬರಲಿಲ್ಲ. ಮಳೆ ತಮ್ಮ ಕಡೆ ಬರಲಿಲ್ಲವಲ್ಲ ಎಂದು ಎಲ್ಲರಿಗೂ ಸಂತೋಷವಾಯಿತು. ಆ ವೇಳೆಗೆ ಕಾಲಸೂಚಿಗಳಾದ ನಕ್ಷತ್ರಗಳು ಮಲಗುವ ಹೊತ್ತಾಯಿ ತೆಂದು ಸೂಚನೆ ಕೊಟ್ಟದ್ದರಿಂದ ಎಲ್ಲರೂ ಬೆಂಕಿಯ ಬೆಳಕನ್ನು ಬಿಟ್ಟು ಕನಸಿನ ಪ್ರಪಂಚದಲ್ಲಿ ಪದ್ಮರಾಗದ ಬೆಳಕನ್ನು ಕಾಣಲಾರಂಭಿಸಿದರು.

ಗುಡಿಸಲಿನ ಮೂಲೆಯೊಂದರಲ್ಲಿ ಯುವಕ ದಂಪತಿಗಳು ತಮ್ಮ ಬಿಡಾರ ಮಾಡಿಕೊಂಡರು. ಉಳಿದವರೆಲ್ಲಾ ಸಂಭಾಷಣೆಯಲ್ಲಿ ಮಗ್ನ ರಾಗಿದ್ದಾಗ ಲಜ್ಜಾಶೀಲಳಾದ ಹೆನ್ನಾ ಮರದ ಕೊಂಬೆಗಳನ್ನೂ ಎಲೆ ಗಳನ್ನೂ ಜೋಡಿಸಿ ತಮಗೂ ಇತರರಿಗೂ ನಡುವೆ ಪರದೆಯನ್ನು ನಿರ್ಮಿಸಿದ್ದಳು. ಗಂಡಹೆಂಡಿರಿಬ್ಬರೂ ಕೈಹಿಡಿದು ಮಲಗಿ ಕನಸಿನಲ್ಲಿ ಯಾವುದೋ ತೇಜಸ್ಸನ್ನು ಕಾಣುತ್ತಾ ನಿದ್ರಿಸಿದರು. ಬೆಳಗ್ಗೆ ಇಬ್ಬರೂ ಏಕಕಾಲದಲ್ಲಿ ಎಚ್ಚತ್ತು ಆ ತೇಜಸ್ಸಿನಲ್ಲಿ ಕಾಣದ ಸುಖವನ್ನು ಪರಸ್ಪರ ಮುಖ ನೋಡುವುದರಲ್ಲಿ ಅನುಭವಿಸಿದರು. ಎದ್ದ ಕೂಡಲೆ ತಮ್ಮ

ಜೀವನದ ಅರಿವೂ ಅನ್ಯೋನ್ಯ ಪ್ರೇಮದ ಅರಿವೂ ಮತ್ತೆ ಬಂದು ಅವರ ಮೊಲುನಗೆಗೆ ಹೊಸ ಕಾಂತಿಯನ್ನು ಕೊಟ್ಟಿತು.

ತಮ್ಮ ಎಲೆಪರದೆಯ ರಂಧ್ರಗಳಿಂದ ಹೆನ್ನಾ ಇಣಿಕಿ ನೋಡಿದಳು. ಹೊರಕೊಠಡಿಯಲ್ಲಿ ಯಾರೂ ಇರಲಿಲ್ಲ.

"ವ್ಯಾಥ್ಯ, ಬೇಗ ಏಳು. ಉಳಿದವರೆಲ್ಲರೂ ಆಗಲೇ ಹೊರಟು ಬಿಟ್ಟಿದ್ದಾರೆ. ಒಂದು ನಿಮಿಷ ತಡಮಾಡಿದರೂ ಪದ್ಮರಾಗ ನಮ್ಮ ಕೈ ತಪ್ಪಿಹೋಗಬಹುದು."

ಪದ್ಮರಾಗದ ಆಸೆ ಈ ಬಡದಂಪತಿಗಳನ್ನು ಅಲ್ಲಿಗೆ ಸೆಳೆದು ತಂದಿದ್ದುದೇನೋ ನಿಜ. ಆದರೆ ಒಂದು ದೃಷ್ಟಿಯಿಂದ ಅವರು ಆ ರತ್ನವನ್ನು ಪಡೆಯಲು ಅನರ್ಹರೆಂದೇ ಹೇಳಬೇಕು. ಅವರ ಜೊತೆಯ ಅನ್ವೇಷಕರು ಜ್ವರಪೀಡಿತರಾದವರಂತೆ ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಹೊರಳುತ್ತಿದ್ದರು. ಅಥವಾ ಅರೆನಿಮಿಷ ಕಣ್ಣು ಮುಚ್ಚಿದರೂ ಕಡಿದಾದ ಪ್ರಪಾತಗಳನ್ನು ಹತ್ತಿ ರತ್ನವನ್ನು ಹುಡುಕುತ್ತಿದ್ದಂತೆ ಕನಸು. ಬೆಳಕು ಹರಿದೊಡನೆಯೇ ಕನಸನ್ನು ನನಸುಮಾಡಿಕೊಳ್ಳಲು ಅವರೆಲ್ಲರೂ ಹೊರಟುಹೋದರು. ಈ ಬಡದಂಪತಿಗಳಾದರೋ, ರಾತ್ರಿ ಮಲಗಿದ ಕ್ಷಣದಿಂದ ಬೆಳಗ್ಗೆ ಸೂರ್ಯನ ಬೆಳಕು ಪರ್ವತ ಶಿಖರಗಳ ಮೇಲೆಲ್ಲಾ ಹರಡುವವರೆಗೆ ಯಾವ ಯೋಚನೆಯೂ ಇಲ್ಲದೆ ಸುಖವಾಗಿ ನಿದ್ರೆ ಮಾಡಿದರು. ವಿಶ್ರಾಂತಿ ಮುಗಿದ ಮೇಲೆ ಪ್ರಾಯದ ಜಿಂಕೆಗಳಂತೆ ಲಘು ಶರೀರಿಗಳಾಗಿ ಇಬ್ಬರೂ ಎದ್ದು ದೇವರಿಗೆ ಪ್ರಾರ್ಥನೆಮಾಡಿ ಅಮನೂಸಕ್ ನದಿಯ ತಂಪಾದ ನೀರಿನಲ್ಲಿ ಸ್ನಾನಮಾಡಿ, ಸ್ವಲ್ಪ ಉಪಾಹಾರವನ್ನು ತೆಗೆದುಕೊಂಡು ಮತ್ತೆ ಪರ್ವತದ ಸಾನುಪ್ರದೇಶದ ಕಡೆ ತಿರುಗಿದರು. ಒಬ್ಬರಿಗೊಬ್ಬರು ಸಹಾಯವಾಗಿ ಅವರು ಕಡಿದಾದ ಬೆಟ್ಟ ಹತ್ತುವುದನ್ನು ನೋಡಿದರೆ, ಇದೇ ದಾಂಪತ್ಯಪ್ರೇಮದ ಸುಂದರಲಾಂಛನ ಎನ್ನುವಂತಿತ್ತು. ಪ್ರಯಾಣದಲ್ಲಿ ಅವರು ಸಣ್ಣ ಸಣ್ಣ ತೊಂದರೆಗಳನ್ನು ಅನುಭವಿಸಬೇಕಾಯಿತು. ಒಂದು ವೇಳೆ ಬಟ್ಟೆ ಮುಳ್ಳುಗಿಡಕ್ಕೆ ಸಿಕ್ಕಿ ಸ್ವಲ್ಪ ಹರಿದು ಹೋಯಿತು; ಕಾಲಿನ ಜೋಡು ಕಳಚಿಕೊಂಡಿತು; ಹೆನ್ನಳ ಕೂದಲು ಮರದ ಕೊಂಬೆಯೊಂದಕ್ಕೆ ಸಿಕ್ಕಿಕೊಂಡಿತು. ಅದೊಂ

ದನ್ನೂ ಲೆಕ್ಕಿಸದೆ ಅವರು ತಾಳ್ಮೆಯಿಂದ ಮೇಲಕ್ಕೆ ಹತ್ತಿ ಬೆಟ್ಟದ ಪಕ್ಕದಲ್ಲಿ ಬೆಳೆದಿದ್ದ ನಿಡಿದಾದ ಕಾಡಿನ ಸೆರಗಿಗೆ ಬಂದರು. ಅಲ್ಲಿಂದ ಮುಂದಿನ ದಾರಿ ಅತ್ಯಂತ ದುರ್ಗಮವಾದದ್ದು. ಅದುವರೆಗೂ ಕಾಡಿನಲ್ಲಿ ಸಾವಿರ ಗಟ್ಟಲೆ ಮರಗಳ ದಟ್ಟವಾದ ಗೋಡೆ ಸುತ್ತಲೂ ಇದ್ದುದರಿಂದ ಅವರು ಶಂಕೆಯಿಲ್ಲದೆ ನಡೆದು ಬಂದಿದ್ದರು. ಈಗ ಮುಂದೆ ಕಂಡ ದೃಶ್ಯ ಅವರನ್ನು ದಿಗಿಲುಗೊಳಿಸಿ ತಮ್ಮಲ್ಲಿ ತಾವೇ ಹುದುಗಿಕೊಳ್ಳುವಂತೆ ಮಾಡಿತು. ಆ ಉನ್ನತಪ್ರಪಂಚದಲ್ಲಿ ಚಂಡಮಾರುತದ ತಾಂಡವ, ಮೇಘಗಳ ಆಂದೋಲನ; ಎಲ್ಲಿ ನೋಡಿದರೂ ತಮ್ಮನ್ನು ಹಿಂದಕ್ಕೆ ನೂಕುವಂತಿದ್ದ ಬೋಳು ಬಂಡೆಗಳು; ಜೊತೆಗೆ ಮರುಭೂಮಿಗೆ ಸಹಜವಾದ ಬಿಸಿಲು. ಈ ಭಯಾನಕವಾದ ನಿರ್ಜನಸಾಮ್ರಾಜ್ಯ ಅವರ ಮುಂದೆ ಮಹೋನ್ನತವಾಗಿ ಏರುತ್ತಿತ್ತು. ಇಬ್ಬರೂ ಆಗತಾನೆ ದಾಟಿ ಬಂದಿದ್ದ ಕಾಡಿನ ಹಸುರಿನ ಕಡೆ ತಿರುಗಿ ನೋಡಿ "ಪಾರವಿಲ್ಲದ ಈ ಭೀಕರವೈಶಾಲ್ಯವನ್ನು ಪ್ರವೇಶಿಸುವುದಕ್ಕಿಂತ ಮತ್ತೆ ಆ ಕಾಡನ್ನೇ ಮರೆ ಹೋಗುವುದುಲೇಸು" ಎಂದುಕೊಂಡರು.

ಪ್ರೇಯಸಿಗೆ ಧೈರ್ಯಕೊಡುವುದಕ್ಕೆ, ಮತ್ತು ಅವಳನ್ನು ತನ್ನ ಹೃದಯದೆಡೆಗೆ ಸೆಳೆದುಕೊಂಡು ತಾನೂ ಶಾಂತಿ ಪಡೆಯುವುದಕ್ಕೆ, ವ್ಯಾಘ್ರ್ಯ ಅವಳ ನಡುವನ್ನು ತೋಳಿನಿಂದ ಸುತ್ತಿದನು

"ಹೆನ್ನಾ, ಮುಂದಕ್ಕೆ ಹೋಗೋಣವೋ ಬೇಡವೊ?"

ಆ ಮದುವಣಗಿತ್ತಿಯ ಮನಸ್ಸೇನೋ ಸರಳವಾದದ್ದು, ಆದರೂ ಅವಳು ಹೆಂಗಸಲ್ಲವೆ? ಹೆಂಗಸಿಗೆ ಸಹಜವಾದ ಒಡವೆಯ ಆಸೆ ಅವಳನ್ನೂ ಬಿಟ್ಟಿದ್ದಲ್ಲ. ಪ್ರಪಂಚದ ರತ್ನಗಳೆಲ್ಲವನ್ನೂ ಧಿಕ್ಕರಿಸುವ ದಿವ್ಯ ರತ್ನ ಕೈಸೇರುವುದಾದರೆ ಅದಕ್ಕಾಗಿ ಯಾವ ಅಪಾಯವನ್ನಾದರೂ ಎದುರಿಸಬಹುದು ಎನ್ನಿಸಿತು. ನಡುಗುವ ಧ್ವನಿಯಿಂದ "ಇನ್ನೂ ಸ್ವಲ್ಪ ದೂರ ಹತ್ತಿ ನೋಡೋಣ" ಎಂದು ಶಿಖರದ ಕಡೆಗೆ ಕಣ್ಣೆತ್ತಿದಳು.

"ಹಾಗಾದರೆ ಬಾ." ತಾನೂ ಧೈರ್ಯ ತಂದುಕೊಂಡು ವ್ಯಾಘ್ರ್ಯ ಅವಳೊಡನೆ ಮುಂದೆ ನಡೆದನು. ಅವನು ಧೈರ್ಯಗೊಂಡೊಡನೆ ಹೆನ್ನ ಮತ್ತೆ ಭೀರುವಾದಳು.

ಮತ್ತಷ್ಟು ದಾರಿ ಕಳೆಯಿತು. ಅವರ ಸುತ್ತಲೂ ಶತಮಾನಗಳ ಕಾಲದಿಂದಬೆಳೆದು ಪಾಚಿಗಟ್ಟಿದ್ದರೂ ಕೇವಲ ಮೂರುಅಡಿ ಮಾತ್ರ ಎತ್ತರ ವಾಗಿದ್ದ ದೇವದಾರು ಮರಗಳು. ಇನ್ನು ಸ್ವಲ್ಪ ಮುಂದೆ ಹೋದರೆ ಜೀವದ ಕುರುಹೇ ಇಲ್ಲದ ಬೆತ್ತಲೆಯ ಬಂಡೆಗಳು. ಅಲ್ಲಲ್ಲಿ ಅಸ್ತವ್ಯಸ್ತ ವಾಗಿ ಬಿದ್ದಿದ್ದ ಕಲ್ಲುಗುಂಡುಗಳ ರಾಶಿ—ಯಾರೋ ರಾಕ್ಷಸರು ತಮ್ಮ ರಾಜನ ಗೋರಿಯ ನೆನಪಿಗೆಂದು ಜೋಡಿಸಿದಂತೆ ಕಾಣುತ್ತಿದ್ದವು. ಬಿಸಿಲು ಮಳೆ ಗಾಳಿಗಳ ಹೊಡೆತಕ್ಕೆ ಸರ್ವದಾ ಸಿಕ್ಕಿ ತೊಳಲುತ್ತಿದ್ದ ಆ ಉನ್ನತ ಪ್ರದೇಶದಲ್ಲಿ ಯಾವ ಬೆಳೆಯೂ ಬದುಕಲಾರದು. ಯಾವ ಪ್ರಾಣಿಯೂ ಜೀವಿಸಿ ಉಸಿರೆಳೆಯಲಾರದು. ಆ ಗಂಡಹೆಂಡಿರಿಬ್ಬರ ಹೃದ ಯದಲ್ಲಿ ಅಡಗಿ ತುಡಿಯುತ್ತಿದ್ದುದಷ್ಟೇ ಅಲ್ಲಿದ್ದ ಜೀವ. ಮನುಷ್ಯರು ಅಷ್ಟು ಎತ್ತರಕ್ಕೆ ಏರಬಯಸಿದರೆ ಪ್ರಕೃತಿದೇವಿಯೂ ಅವರೊಡನೆ ಬರಲಾರಳು. ಆಕೆ ದೂರದಲ್ಲಿದ್ದ ಕಾಡಿನ ಸೆರಗಿನಲ್ಲೇ ನಿಂತು "ನನ್ನ ಹಸುರು ಹೆಜ್ಜೆ ಯನ್ನೇ ಕಾಣದಿರುವ ಆ ಸ್ಥಳಕ್ಕೆ ಈ ಹಸುಮಕ್ಕಳು ಹೋಗುವರಲ್ಲ!" ಎಂದು ಅವರ ಕಡೆಗೆ ಚಿಂತೆಯ ದೃಷ್ಟಿಯನ್ನು ಬೀರುತ್ತಿದ್ದಳು. ಇನ್ನು ಸ್ವಲ್ಪ ಮುಂದೆ ಹೋದರೆ ಅವರು ಪ್ರಕೃತಿಯ ದೃಷ್ಟಿಗೂ ಬೀಳಲಾರರು. ಅವರಿದ್ದ ಸ್ಥಳದಿಂದ ಕೆಳಗೆ, ಪರ್ವತರಾಜನು ತನ್ನ ಬಂಧುಗಳಾದ ಮೇಘಗಳನ್ನು ಮಂತ್ರಾಲೋಚನೆಗಾಗಿ ಕರೆಸಿದ್ದನೋ ಎಂಬಂತೆ ನಾಲ್ಕು ದಿಕ್ಕುಗಳಿಂದಲೂ ಕಾರ್ಮೋಡಗಳು ಬಂದು ಸೇರಿ ಬೆಟ್ಟವನ್ನೂ ಕಾಡನ್ನೂ ತಮ್ಮ ನೆರಳಿನಿಂದ ಮುಚ್ಚಿದವು. ದಟ್ಟವಾಗಿ ಮೋಡಗಳು ಸೇರಿ ಆಕಾಶದಲ್ಲಿ ಮೇಲೆ ನಡೆಯಬಹುದೆನ್ನುವಷ್ಟು ಭದ್ರವಾದ ನೆಲವನ್ನು ನಿರ್ಮಿಸಿದ್ದವು. ಅವುಗಳನ್ನು ಭೇದಿಸಿ ಭೂಮಿತಾಯಿಯ ಮಡಿಲನ್ನು ಮತ್ತೆ ಸೇರುವುದು ಅಸಾಧ್ಯವೆನ್ನಿಸಿತು. ವ್ಯಾಧ್ಯುವಿಗೂ ಹೆನ್ನಳಿಗೂ ಮನಸ್ಸಿನಲ್ಲಿ ಭಯ ಅಂಕುರಿಸಿತು. ಆಕಾಶವೆಲ್ಲಾ ಮೋಡ ದಿಂದ ಆವೃತವಾಗಿದ್ದಾಗ ಸೂರ್ಯನ ಬೆಳಕನ್ನು ಕಾಣಲು ಎಷ್ಟು ಹಾತೊರೆಯುತ್ತಿದ್ದರೋ ಅದರ ಹತ್ತರಷ್ಟು ಆತುರದಿಂದ ತಮ್ಮ ಹಸು ರುಡುಗೆಯ ಭೂಮಿಯನ್ನು ನೋಡಬೇಕೆಂದು ತವಕಿಸಿದರು. ಮೋಡ ಗಳು ಬೆಟ್ಟದ ಪಕ್ಕಗಳನ್ನೆಲ್ಲಾ ಸಂಪೂರ್ಣವಾಗಿ ಆವರಿಸಿ ಮೇಲಕ್ಕೆ

ಏರುತ್ತಾ ಕೊನೆಗೆ ಒಂಟಿಯಾಗಿ ನಿಂತಿದ್ದ ಶಿಖರವನ್ನೂ ಮುತ್ತಿದವು. ಅದು ಕಣ್ಣಿಗೆ ಬೀಳದೆ ಮುಚ್ಚಿ ಹೋದದ್ದರಿಂದ ಅವರಿಗೆ ಸಂತೋಷವೇ ಆಯಿತು. ಆದರೂ ವಿಶ್ವವನ್ನೇ ನುಂಗುವಂತಿದ್ದ ಆ ಮೋಡಗಳು ತಮ್ಮನ್ನು ಎಲ್ಲಿ ಬೇರೆ ಮಾಡುವುವೋ ಎಂಬ ಭಯದಿಂದ ಇಬ್ಬರೂ ಮತ್ತಷ್ಟು ಹತ್ತಿರ ಸರಿದು ಒಬ್ಬರ ಮುಖವನ್ನೊಬ್ಬರು ಪ್ರೀತಿಯಿಂದ ನೋಡಿದರು.

ಇಷ್ಟಾದರೂ ಧೈರ್ಯಗುಂದದೆ ಕಾಲಿಡಲು ಸ್ಥಳ ಕಾಣುವವರೆಗೂ ಮೇಲೆ ಹತ್ತಿದರು. ಹೆನ್ನಳ ಶಕ್ತಿಯುಡುಗಿ ಉಸಿರಾಡುವುದೂ ಕಷ್ಟವಾಯಿತು. ಕೈಕಾಲುಗಳು ನಡುಗುತ್ತಿದ್ದರೂ ಗಂಡನಿಗೆ ತೊಂದರೆಯಾದೀತೆಂಬ ಶಂಕೆಯಿಂದ ಅವನ ಸಹಾಯವನ್ನೂ ಒಲ್ಲದೆ, ಏಳುತ್ತ ಬೀಳುತ್ತ ಸ್ವಲ್ಪ ಮುಂದೆ ನಡೆದು, ಕೊನೆಗೆ ಸೋತು ಬಂಡೆಯೊಂದರ ಮೇಲೆ ಕುಳಿತುಬಿಟ್ಟಳು.

" ಮ್ಯಾಥ್ಯು, ನಾವು ಕೆಟ್ಟೆವು. ಮತ್ತೆ ಭೂಮಿಯನ್ನು ಕಾಣುವ ಭಾಗ್ಯ ನಮಗಿಲ್ಲವೆಂದೇ ತೋರುತ್ತದೆ. ಇದ್ದುದರಲ್ಲೇ ತೃಪ್ತಿಗೊಂಡಿದ್ದರೆ ನಮ್ಮ ಗುಡಿಸಲಿನಲ್ಲಿ ಎಷ್ಟು ಸುಖವಾಗಿರಬಹುದಾಗಿತ್ತು ! "

" ಹೆದರಬೇಡ ಚಿನ್ನ, ಮತ್ತೆ ಅಲ್ಲಿಗೇ ಹೋಗಿ ಸುಖವಾಗಿರುತ್ತೇವೆ. ಈ ಕಡೆ ನೋಡು, ಮಂಜು ಕರಗಿ ಸ್ವಲ್ಪ ಹೊಳಪಾದರೆ ನಾವು ಕಣಿವೆಯ ದಾರಿಯನ್ನು ಗೊತ್ತುಹಿಡಿಯಬಹುದು. ಪದ್ಮರಾಗದ ಹಂಬಲು ಸಾಕು, ಹೆನ್ನಾ. ಹಿಂದಕ್ಕೆ ಹೊರಟುಬಿಡೋಣ."

ನಿರುತ್ಸಾಹದಿಂದ ಹೆನ್ನಾ ಬಿಸಿಲು ಕಂಡ ಕಡೆಗೆ ತಿರುಗಿದಳು. ಅವಳಿಗೆ ಸ್ವಲ್ಪ ಆಶ್ಚರ್ಯವಾಯಿತು.

" ಆ ದಿಕ್ಕಿನಲ್ಲಿ ಸೂರ್ಯ ಎಲ್ಲಿಂದ ಬರಬೇಕು! ಈಗ ಮಧ್ಯಾಹ್ನದ ಸಮಯ. ಸೂರ್ಯನ ಬೆಳಕು ಕಾಣುವುದಾದರೆ ಅದು ನೆತ್ತಿಯ ಮೇಲೆ ಕಾಣಬೇಕು.''

ಮ್ಯಾಥ್ಯುವೂ ಆಶ್ಚರ್ಯದಿಂದ ನೋಡಿದನು. " ಅಲ್ಲಿ ನೋಡು, ಘಳಿಗೆ ಘಳಿಗೆಗೂ ಅದರ ಪ್ರಕಾಶ ಹೆಚ್ಚುತ್ತಿದೆ. ಸೂರ್ಯನ ಬೆಳಕಲ್ಲ ವಿದ್ದರೆ. . . . . ಇನ್ನೇನಿರಬಹುದು ?''

ಸಂದೇಹವೇನೂ ಇಲ್ಲ; ಮುಂಜಿನ ಮುಸುಕನ್ನು ಹರಿದು ಯಾವುದೋ ಜ್ಯೋತಿ ಮೊದಲು ಸ್ವಲ್ಪ ಮಂಕಾಗಿ, ಅನಂತರ ಕೆಂಪು ಛಾಯೆಯನ್ನು ತಾಳಿ, ನೋಡುತ್ತಿದ್ದ ಹಾಗೆಯೇ ಹೆಚ್ಚು ಕಾಂತಿಯುಕ್ತವಾಗಿ ಮಿಂಚಿನ ಅಲಗಿನಂತೆ ಮೋಡಗಳನ್ನು ಸೀಳಿ ಬರುತ್ತಿತ್ತು. ಅದುವರೆಗೂ ಕತ್ತಲೆಯಲ್ಲಿ ಅಡಗಿದ್ದ ವಸ್ತುಗಳು ಮೋಡವು ಹರಿದ ಹಾಗೆಲ್ಲಾ ಒಂದೊಂದಾಗಿ ಕಣ್ಣಿಗೆ ಕಾಣಲಾರಂಭಿಸಿದವು. ಸೃಷ್ಟಿಗೆ ಪೂರ್ವಭಾವಿಯಾಗಿದ್ದ ಅವ್ಯವಸ್ಥಿತ ಸ್ಥಿತಿ ನಾಶವಾಗಿ ಹೊಸದೊಂದು ವಿಶ್ವ ಅವರ ಕಣ್ಣಮುಂದೆ ಸೃಷ್ಟಿಯಾಗುತ್ತಿರುವಂತೆ ತೋರಿತು. ಈ ಕ್ರಮ ಮುಂದುವರಿದು ಅವರ ಕಾಲಿನ ಬಳಿಯಲ್ಲೇ ನೀರಿನ ಹೊಳಪು ಕಾಣಿಸಿತು. ಅವರು ನಿಂತಿದ್ದುದು ಆಳವಾದ, ಸ್ಫಟಿಕದಂತೆ ತಿಳಿಯಾದ, ಸೌಮ್ಯವಾದ ಸರೋವರದ ದಡದಲ್ಲಿ. ಅದರ ಕಿರುದೆರೆಗಳ ಮೇಲೆ ಮಿಂಚಿನಂಥ ಕಿರಣವೊಂದು ಹಾದುಹೋಯಿತು. ಆಶ್ಚರ್ಯಾನಂದಗಳಿಂದ ಅವರಿಬ್ಬರೂ ಕಣ್ಣು ಮುಚ್ಚಿದರು. ಮತ್ತೆ ಕಣ್ಣು ಬಿಟ್ಟು ನೋಡಿದರೆ, ಸರೋವರದ ಮೇಲೆ ಬಗ್ಗಿ ನೋಡುವಂತಿದ್ದ ಶಿಖರದ ತುದಿಯಿಂದ ಕಣ್ಣು ಕೋರೈಸುವ ದಿವ್ಯ ಪ್ರಭೆ ಹೊರಟಿತ್ತು. ಮಾಯಾ ಸರಸ್ಸಿನ ಬಳಿ ಇದ್ದ ಪದ್ಮರಾಗದ ಗರ್ಭಗುಡಿಯನ್ನು ಆ ಸರಳ ಹೃದಯದ ದಂಪತಿಗಳು ಹೇಗೋ ತಲಪಿದ್ದರು.

ತಮ್ಮ ಯಾತ್ರೆ ಫಲಿಸಿದ ಆನಂದದಿಂದ ಒಬ್ಬರನೊಬ್ಬರು ಅಪ್ಪಿಕೊಂಡರೂ ಆ ರತ್ನದ ವಿಷಯವಾಗಿ ಕೇಳಿದ್ದ ಕಥೆಗಳನ್ನು ನೆನಪಿಗೆ ತಂದು ಕೊಂಡು ಇಬ್ಬರೂ ನಡುಗಿದರು. ವಿಧಿ ಯಾವ ಉದ್ದೇಶದಿಂದ ತಮ್ಮನ್ನು ಅಲ್ಲಿಗೆ ಸೆಳೆದುತಂದಿತೋ ಎಂಬ ಭಯದಿಂದ ಅವರು ವಿಹ್ವಲರಾದರು. ಆ ರತ್ನದ ದುಸ್ಸಹವಾದ ಕಾಂತಿಯು ಅವರ ಮುಖ, ಸರೋವರ, ಕಲ್ಲುಬಂಡೆಗಳು, ಅಂತರಿಕ್ಷ, ತನ್ನ ಶಕ್ತಿಗೆ ಹೆದರಿ ಓಡುತ್ತಿದ್ದ ಮೋಡಗಳು—ಎಲ್ಲದರ ಮೇಲೆಯೂ ಜ್ವಲಿಸಿತು. ವ್ಯಾಘ್ರ್ಯವೂ ಹೆನ್ನಳೂ ಒಬ್ಬರನ್ನೊಬ್ಬರು ಗುರುತಿಸುವುದೇ ಕಷ್ಟವಾಯಿತು ಆದರೆ ಮರುಕ್ಷಣದಲ್ಲಿಯೇ ಅವರು ಪದ್ಮರಾಗವನ್ನು ಹೊತ್ತಿದ್ದ ಪ್ರಪಾತದ ಬುಡದಲ್ಲಿ ಆ ರತ್ನವನ್ನೂ ಮರೆಸುವಂಥ ಬೇರೊಂದು ದೃಶ್ಯವನ್ನು ಕಂಡರು. ನೇರ

ವಾಗಿ ಆ ರತ್ನದ ಕೆಳಗೆ ಪ್ರಪಾತವನ್ನು ಹತ್ತುವವನಂತೆ ಕೈಯನ್ನು ಮೇಲಕ್ಕೆ ಚಾಚಿ, ರತ್ನದ ಪ್ರಭೆಯನ್ನು ಹೀರಿಕೊಳ್ಳುವವನಂತೆ ಮುಖವನ್ನೆತ್ತಿ ಮನುಷ್ಯನೊಬ್ಬನು ನಿಂತಿದ್ದನು. ಆದರೆ ಅವನ ಶರೀರದಲ್ಲಿ ಚಲನೆಯಿಲ್ಲ; ಕೇವಲ ಶಿಲಾಮೂರ್ತಿಯಂತಿದ್ದನು.

ಹೆನ್ನಾ ಪತಿಯ ತೋಳನ್ನು ಬಿಗಿಯಾಗಿ ಹಿಡಿದು, ಹೆದರಿದ ದನಿಯಲ್ಲಿ ಕೇಳಿದಳು: "ಅವನೇ ಅನ್ವೇಷಕನಲ್ಲವೆ? ಮ್ಯಾಥ್ಯು, ಅವನು ಸತ್ತುಹೋಗಿದ್ದಾನೆ."

ಮ್ಯಾಥ್ಯುವೂ ನಡುಗಿದನು. "ಹೌದು. ತನ್ನ ಜೀವದ ಆಸೆ ಸಫಲವಾದ ಆನಂದವನ್ನು ತಡೆಯಲಾರದೆ ಪ್ರಾಣಬಿಟ್ಟಿರಬೇಕು. ಅಥವಾ ಪದ್ಮರಾಗದ ಪ್ರಭೆಯಿಂದಲೇ ಮರಣ ಬಂತೊ!"

ಅವರ ಹಿಂದೆ ಬೇಸರದ ದನಿಯೊಂದು ಕೇಳಿಸಿತು.

"ಪದ್ಮರಾಗವೆಲ್ಲಿ ಬಂತು! ಅದು ಬರಿಯ ಮೋಸ."

ಹಿಂತಿರುಗಿ ನೋಡಿದರೆ ಎಂದಿನಂತೆ ತನ್ನ ಕನ್ನಡಕ ಹಾಕಿಕೊಂಡು ಸರೋವರದ ಕಡೆ, ಉರುಳಿಹೋಗುತ್ತಿದ್ದ ಮೋಡಗಳ ಕಡೆ, ಬಂಡೆಗಳ ಕಡೆ, ಕೊನೆಗೆ ಪದ್ಮರಾಗದ ಕಡೆ—ಸುತ್ತಲೂ ನೋಡುತ್ತಿದ್ದ ತೆಗಳುಗಾರ. ಆ ಸ್ಥಳವನ್ನು ಬಿಟ್ಟು ಓಡುತ್ತಿದ್ದ ಮಂಜೆಲ್ಲವೂ ಅವನ ದೃಷ್ಟಿಯನ್ನು ಕವಿದಿತೋ ಏನೋ, ಪದ್ಮರಾಗವನ್ನು ದಿಟ್ಟಿಸಿ ನೋಡಿದರೂ ಅವನಿಗೆ ಅದು ಗೋಚರಿಸಿದಂತೆ ತೋರಲಿಲ್ಲ. ಅದರ ಬೆಳಕಿನಿಂದ ತನ್ನ ನೆರಳು ಕಾಲಿನ ಬಳಿ ಬೀಳುತ್ತಿತ್ತು. ಆದರೂ ಅವನಿಗೆ ಆ ರತ್ನದ ಇರವಿನಲ್ಲೇ ನಂಬಿಕೆಯಿಲ್ಲ.

"ಎಲ್ಲಿ ನಿಮ್ಮ ರತ್ನ? ಅದನ್ನು ತೋರಿಸಿದವರಿಗೆ ಏನು ಬೇಕಾದರೂ ಕೊಡಬಹುದು!"

ದೇವರು ಕಣ್ಣುಕೊಟ್ಟಿದ್ದರೂ ತಾನಾಗಿ ಕುರುಡತನವನ್ನು ಆಶ್ರಯಿಸುತ್ತಿರುವ ಈ ವಿಚಿತ್ರಮನುಷ್ಯನನ್ನು ಕಂಡು ಮ್ಯಾಥ್ಯುವಿಗೆ ರೇಗಿತು. ಅವನ ಹೆಗಲು ಹಿಡಿದು ಬಲಾತ್ಕಾರವಾಗಿ ರತ್ನದ ಕಡೆ ತಿರುಗಿಸಿದನು.

"ನೋಡು, ನಿನ್ನ ಸುಡುಗಾಡಿನ ಕನ್ನಡಕ ತೆಗೆದರೆ ಕಾಣುತ್ತದೆ!"

ಹೊಗೆ ಗಾಜಿನ ಮೂಲಕ ಗ್ರಹಣವನ್ನು ನೋಡಿದಾಗ ಬೆಳಕು

ಮುಬ್ಬಾಗುವಂತೆ ಆ ಬಣ್ಣದ ಕನ್ನಡಕದ ಪ್ರಭಾವದಿಂದ ಅವನಿಗೆ ಪ್ರಪಂಚವೇ ಕತ್ತಲಾಗಿ ಕಂಡಿರಬೇಕು. ಹೇಗೋ ಧೈರ್ಯಮಾಡಿ ಅದನ್ನು ಮೂಗಿನ ಮೇಲಿಂದ ತೆಗೆದು ಪದ್ಮರಾಗದ ಜ್ವಾಲೆಹೊರಡು ತ್ತಿದ್ದ ಕಡೆ ದಿಟ್ಟಿಸಿ ನೋಡಿದನು. ಒಡನೆಯೇ ಗಡಗಡನೆ ನಡುಗಿ ತಲೆ ತಗ್ಗಿಸಿ, ವಿಲಕ್ಷಣವಾಗಿ ಕೂಗಿಕೊಂಡು ಎರಡು ಕೈಗಳಿಂದಲೂ ಕಣ್ಣುಗಳನ್ನು ಭದ್ರವಾಗಿ ಮುಚ್ಚಿಕೊಂಡನು. ಎಷ್ಟೋ ವರ್ಷಗಳಿಂದ ಬೆಳಕಿನ ಅನುಭವವೇ ಇಲ್ಲದೆ ನಿಶ್ಶಕ್ತಿಹೊಂದಿದ್ದ ಅವನ ಕಣ್ಣುಗಳಿಗೆ ಅಂದಿನಿಂದ ಪದ್ಮರಾಗದ ಬೆಳಕು ಹಾಗಿರಲಿ, ಭೂಮಿಯ ಬೆಳಕಾಗಲಿ ಸ್ವರ್ಗದ ಬೆಳಕಾಗಲಿ ಯಾವುದೂ ಇಲ್ಲವಾಯಿತು. ಆ ಮಹಾರತ್ನದ ಪ್ರಭೆ ಅವನ ಬೆತ್ತಲೆಗಣ್ಣಿನ ಮೇಲೆ ಬಿದ್ದೊಡನೆಯೇ ಅವನು ಕುರುಡ ನಾದನು.

ಹೆನ್ನಾ ಮೂರ್ಛೆಹೋಗುವ ಸ್ಥಿತಿಯಲ್ಲಿದ್ದಳು. ಗಂಡನ ಕೈಹಿಡಿದು ಕೊಂಡು "ಮ್ಯಾಥ್ಯು, ಇಲ್ಲಿ ನಿಲ್ಲಬಾರದು. ನಾವು ಹಿಂದಕ್ಕೆ ಹೋಗೋಣ" ಎಂದಳು.

ಮ್ಯಾಥ್ಯು ಮೊಣಕಾಲೂರಿ ಕುಳಿತು ಅವಳಿಗೆ ಆಸರೆ ಕೊಟ್ಟು, ಸರೋವರದ ತಣ್ಣೀರನ್ನು ಮುಖದ ಮೇಲೆ ಎರಚಿದನು. ಕಂಪಿಸುತ್ತಿದ್ದ ಆಕೆಯನ್ನು ಅಪ್ಪಿಕೊಂಡು ಸಮಾಧಾನಪಡಿಸಿದನು.

" ನಿಜ, ಹೆನ್ನಾ, ಇಲ್ಲಿ ನಿಲ್ಲಬಾರದು. ಈಗಲೇ ಹಿಂತಿರುಗಿ ನಮ್ಮ ಬಡತನದ ಗುಡಿಸಲನ್ನು ಸೇರಿಕೊಳ್ಳೋಣ. ನಮ್ಮ ಭಾಗಕ್ಕೆ ದೇವರು ಕರುಣಿಸಿದ ಬಿಸಿಲು ಬೆಳುದಿಂಗಳುಗಳಿದ್ದೇ ಇವೆ. ಏನಿಲ್ಲದಿದ್ದರೂ ಸಂಜೆ ನಮ್ಮ ಒಲೆಯಲ್ಲಿ ಬೆಂಕಿ ಹತ್ತಿಸಿ ಅದರ ಬೆಳಕಿನಲ್ಲಿಯೇ ಸಂತೋಷ ವಾಗಿರಬಹುದು. ಪ್ರಪಂಚವೆಲ್ಲವೂ ಯಾವ ಬೆಳಕನ್ನು ಅನುಭವಿಸು ತ್ತದೆಯೋ ಅದಕ್ಕಿಂತ ಹೆಚ್ಚಿನದನ್ನು ನಾವು ಬಯಸಬಾರದು "

" ಹೌದು. ಈ ಪದ್ಮರಾಗದ ಭಯಾನಕವಾದ ಜ್ಯೋತಿಯಲ್ಲಿ ನಾವು ರಾತ್ರಿ ನಿದ್ರಿಸಲಾಗುವುದಿಲ್ಲ ; ಬದುಕುವುದಕ್ಕೂ ಆಗುವುದಿಲ್ಲ."

ಅದುವರೆಗೆ ಜೀವದ ಸ್ಪರ್ಶಕ್ಕೇ ಸಿಕ್ಕದಿದ್ದ ಆ ಸರೋವರದ ಪರಿ ಶುದ್ಧವಾದ ನೀರನ್ನು ಇಬ್ಬರೂ ಒಂದೊಂದು ಬೊಗಸೆ ಕುಡಿದರು.

ದೃಷ್ಟಿಹೀನನಾದ ತೆಗಳುಗಾರನು ತನ್ನ ಸಂಕಟವನ್ನು ಒತ್ತಿ ಹಿಡಿದು ಅವರ ಹಿಂದೆ ಮೌನವಾಗಿ ನಿಂತಿದ್ದನು. ಅವನನ್ನು ಕೈಹಿಡಿದು ನಡೆಸಿ ಕೊಂಡು ಇಬ್ಬರೂ ಬೆಟ್ಟವನ್ನು ಇಳಿಯಲಾರಂಭಿಸಿದರು. ಒಂದು ಬಾರಿ ಮಾತ್ರ ಅವರ ದೃಷ್ಟಿ ರತ್ನದ ಕಡೆಗೆ ಹೊರಳಿತು. ಮತ್ತೆ ಕವಿಯು ತ್ತಿದ್ದ ಮಂಜಿನ ನಡುವೆ ಹೊಗೆಯಾಡುವ ಬೆಂಕಿಯಂತೆ ಪದ್ಮರಾಗವು ಉರಿಯುತ್ತಿತ್ತು.

ಉಳಿದ ಯಾತ್ರಿಕರ ವಿಷಯ ಒಂದೆರಡು ಮಾತು ಹೇಳಬಹುದು. ಐಕಬಾಡ್ ಪಿಗ್‌ಸ್ನೋರ್ಟ್ ರತ್ನಾನ್ವೇಷಣೆಯನ್ನೇ ಬಿಟ್ಟುಬಿಟ್ಟನು. ಅದರಲ್ಲಿ ಲಾಭಕ್ಕಿಂತ ಅಪಾಯವೇ ಹೆಚ್ಚೆಂದು ನಿರ್ಣಯಿಸಿ, “ಅಂಗಡಿ ಮುಂಗಟ್ಟುಗಳನ್ನು ನೋಡಿಕೊಂಡು ಸುಖವಾಗಿರುವುದೇ ಲೇಸು” ಎಂದುಕೊಂಡು ಬಾಸ್ಟನ್ ನಗರಕ್ಕೆ ಹಿಂತಿರುಗಿದನು. ಆದರೆ ದುರ ದೃಷ್ಟವಶಾತ್ ಕಣಿವೆಯನ್ನು ದಾಟುತ್ತಿದ್ದಾಗ ಕೆಲವು ಇಂಡಿಯನ್ ಯೋಧರು ಅವನನ್ನು ಸೆರೆಹಿಡಿದು ಮಾಂಟ್ರೀಲ್ ಪಟ್ಟಣಕ್ಕೆ ಕರೆ ದೊಯ್ದರು. ತಾನು ಗಳಿಸಿಟ್ಟಿದ್ದ ಐಶ್ವರ್ಯದಲ್ಲಿ ಬಹುಭಾಗವನ್ನು ಅವರಿಗೆ ಕಾಣಿಕೆಯಾಗಿ ಕೊಟ್ಟು ಬಿಡುಗಡೆ ಹೊಂದಬೇಕಾಯಿತು. ಬಹಳ ದಿನ ಅಂಗಡಿಯ ಕಡೆಗೆ ಗಮನಕೊಡದೆ ಇದ್ದುದರಿಂದ ವ್ಯಾಪಾರ ವೆಲ್ಲಾ ಅವ್ಯವಸ್ಥೆಯಾಗಿ, ಅವನು ಚಿನ್ನ ಬೆಳ್ಳಿಯಲ್ಲಿ ಹೊರಳುವುದು ಹಾಗಿರಲಿ, ಹೊಟ್ಟೆ ಹೊರೆಯುವುದಕ್ಕೊಂದು ಕುರುಡು ಕಾಸೂ ಗತಿ ಯಿಲ್ಲದೆ ಬದುಕನ್ನು ನೂಕಬೇಕಾಯಿತು. ರಸವಿಜ್ಞಾನಿ ಕಾಕಾ ಫೋಡೆಲ್ ತನಗೆ ಸಿಕ್ಕಿದ ಕಲ್ಲಿನ ಚೂರನ್ನು ತೆಗೆದುಕೊಂಡು ಪ್ರಯೋಗ ಶಾಲೆಗೆ ಹಿಂತಿರುಗಿದನು. ಅದನ್ನು ಪುಡಿಮಾಡಿ ದ್ರಾವಣದಲ್ಲಿ ನೆನೆಯಿಸಿ, ಮೂಸೆಯಲ್ಲಿ ಕರಗಿಸಿ ಪುಟಕ್ಕೆ ಹಾಕಿ, ಹೊರಲಾರದಷ್ಟು ದಪ್ಪವಾದ ಗ್ರಂಥದಲ್ಲಿ ತನ್ನ ಪ್ರಯೋಗದ ಫಲಿತಾಂಶವನ್ನೆಲ್ಲಾ ಪ್ರಕಟಿಸಿದನು. ಅವನ ಉದ್ದೇಶಕ್ಕೆ ಕಲ್ಲಿಗೆ ಬದಲಾಗಿ ಪದ್ಮರಾಗವೇ ಸಿಕ್ಕಿದ್ದರೂ ಇದ ಕ್ಕಿಂತ ಹೆಚ್ಚು ಪ್ರಯೋಜನವೇನೂ ಆಗುತ್ತಿರಲಿಲ್ಲ. ಕವಿಯೂ ಸಹ ಹಾಗೇ ಭ್ರಾಂತಿಗೊಂಡು ಕತ್ತಲು ಗುಹೆಯೊಂದರಲ್ಲಿ ಸಿಕ್ಕಿದ ಮಂಜು ಗಡ್ಡೆಯ ಚೂರನ್ನು ಸಂಗ್ರಹಿಸಿ, “ರತ್ನದಲ್ಲಿ ಯಾವ ಗುಣಗಳಿರಬೇ

ಕೆಂದು ಊಹಿಸಿದ್ದೆನೋ ಅವೆಲ್ಲಾ ಇದರಲ್ಲಿಯೂ ಇವೆ. ಇದೇ ಪದ್ಮ ರಾಗವಿರಬೇಕು" ಎಂದು ಎಲ್ಲರೊಡನೆಯೂ ಹೇಳಿಕೊಂಡನು. ಅವನು ಬರೆದ ಕಾವ್ಯದಲ್ಲಿ ಪದ್ಮರಾಗದ ಪ್ರಭೆಯಿಲ್ಲದಿದ್ದರೂ ಮಂಜುಗಡ್ಡೆಯ ಕೊರೆತವೇನೋ ಇತ್ತೆಂದು ವಿಮರ್ಶಕರ ಅಭಿಪ್ರಾಯ. ಲಾರ್ಡ್ ಡಿ ವಿ ಯರನು ತನ್ನ ಪೂರ್ವಜರ ಮಹಲಿಗೆ ಹಿಂತಿರುಗಿ ಅಲ್ಲಿದ್ದ ತೂಗು ದೀಪಗಳ ಬೆಳಕಿನಿಂದಲೇ ತೃಪ್ತಿಪಡೆಯಬೇಕಾಯಿತು. ಕಾಲಕ್ರಮದಲ್ಲಿ ತನ್ನ ಪಿತೃಗಳೊಡನೆ ತಾನೂ ಒಂದು ಸಮಾಧಿಯನ್ನಲಂಕರಿಸಿದನು. ಅವನ ಉತ್ತರಕ್ರಿಯೆ ನಡೆಯುತ್ತಿದ್ದಾಗ ಅಲ್ಲಿಯೂ ದೀಪಗಳ ಬೆಳ ಕಿತ್ತು. ಮರ್ತ್ಯರ ವೈಭವವೆಲ್ಲಾ ಕೇವಲ ಹುರುಳಿಲ್ಲದ ಚಿಪ್ಪು ಎಂದು ತೋರಿಸುವುದಕ್ಕೆ ಪದ್ಮರಾಗದ ಸಹಾಯವೇನೂ ಬೇಕಾಗಲಿಲ್ಲ.

ಇನ್ನು ಉಳಿದವನು ಕನ್ನಡಕದ ತೆಗಳುಗಾರ. ಹಿಂದೆ ಬುದ್ಧಿ ಪೂರ್ವಕವಾಗಿಯೇ ಕುರುಡನಾಗಿ ಯಾವ ಬೆಳಕನ್ನು ಅಲ್ಲಗಳೆದಿದ್ದನೋ ಅದರ ಒಂದೇ ಒಂದು ಕಿರಣವಾದರೂ ತನ್ನ ಮೇಲೆ ಬಿದ್ದು ಆನಂದವನ್ನು ಕೊಟ್ಟೀತೆ, ಎಂದು ತಡೆಯಲಾರದ ಅಳಲಿನಿಂದ ಪ್ರಪಂಚವನ್ನೆಲ್ಲಾ ಸುತ್ತಿದನು. ತಾನು ಅಲ್ಲಗಳೆದಿದ್ದ ತೇಜಸ್ಸಿನಿಂದಲೇ ಇಂಗಿ ಹೋದ ಕಣ್ಣುಗಳನ್ನು ರಾತ್ರಿಯೆಲ್ಲಾ ಚಂದ್ರನ ಕಡೆಗೂ ನಕ್ಷತ್ರಗಳ ಕಡೆಗೂ ತಿರುಗಿಸಿ ನಿಲ್ಲುವನು; ಪರ್ಷಿಯಾ ದೇಶದ ವಿಗ್ರಹಾರಾಧಕ ರಂತೆ ಸೂರ್ಯೋದಯಸಮಯದಲ್ಲಿ ಪೂರ್ವಾಭಿಮುಖನಾಗಿ ಕೈ ಜೋಡಿಸಿ ನಿಲ್ಲುವನು ಸೆಂಟ್ ಪೀಟರಿನ ಚರ್ಚಿನಲ್ಲಿ ನಡೆಯುವ ದೀಪೋತ್ಸವವನ್ನು ನೋಡಲೆಂದು ರೋಮ್‌ನಗರದ ಯಾತ್ರೆ ಮಾಡಿದನು. ಕೊನೆಗೆ ಲಂಡನ್‌ನಗರ ಹತ್ತಿ ಉರಿಯುತ್ತಿದ್ದಾಗ, ಭೂಮಿಯಿಂದ ಆಕಾಶದವರೆಗೂ ವ್ಯಾಪಿಸಿದ್ದ ಆ ಅಗ್ನಿ ಪ್ರಳಯದಲ್ಲಾದರೂ ತನ್ನ ಭಾಗಕ್ಕೆ ಒಂದು ಕಿರಣ ಸಿಕ್ಕೀತೆಂಬ ಆಸೆಯಿಂದ ಜ್ವಾಲೆಯೊಳಕ್ಕೆ ನುಗ್ಗಿ ತನ್ನ ಪ್ರಾಣವನ್ನೊಪ್ಪಿಸಿದನು.

ಮ್ಯಾಥ್ಯು ಮತ್ತು ಹೆನ್ನಾ ಅನೇಕ ವರ್ಷಕಾಲ ಶಾಂತಿಯಿಂದ ಬಾಳಿದರು. ಆಗಿಂದಾಗ ತಮ್ಮ ನೆರೆಹೊರೆಯವರಿಗೆ ಪದ್ಮರಾಗದ ಕಥೆಯನ್ನು ಹೇಳುವುದೆಂದರೆ ಅವರಿಗೆ ಬಹಳ ಇಷ್ಟ. ಅವರು ಮುದುಕ

ರಾಗುವ ವೇಳೆಗೆ ಪದ್ಮರಾಗದ ನೆನಪೇ ಅಳಿದುಹೋಗಿ ಜನರಿಗೆ ಅದರ ಕಥೆಯಲ್ಲಿ ನಂಬಿಕೆ ಕಡಿಮೆಯಾಗಿತ್ತು. ಪ್ರಪಂಚದಲ್ಲಿ ಮತ್ತೆಲ್ಲಿಯೂ ಕಾಣದಷ್ಟು ಕಾಂತಿಯುಕ್ತವಾದ ರತ್ನ ಅವರಿಬ್ಬರ ಕೈವಶವಾಗುವಂತಿತ್ತು. ಆದರೂ " ಅದು ನಮಗೆ ಬೇಡ " ಎನ್ನುವಂಥ ಸರಳಬುದ್ಧಿ ಯಾವ ದಿನ ಕೇವಲ ಮರ್ತ್ಯರಾದವರಲ್ಲಿ ಕಂಡು ಬಂತೋ ಅಂದಿನಿಂದ ಆ ರತ್ನದ ಪ್ರಭೆಯೇ ಮಸಕಾಗಿ ಹೋಯಿತಂತೆ. ಅವರು ಪರ್ವತದಿಂದ ಇಳಿದು ಬಂದಮೇಲೆ ಪದ್ಮರಾಗವು ತನ್ನ ನೆಲೆಯಿಂದ ಕಳಚಿ ಆ ಮಾಯಾಸರಸ್ಸಿಗೆ ಬಿದ್ದಿತೆಂದೂ, ಈಗಲೂ ನಡುಹಗಲಿನಲ್ಲಿ ಅನ್ವೇಷಕನು ಅಲ್ಲಿಯೇ ಬಾಗಿ ನೋಡುತ್ತಾ ನಿಂತಿರುವನೆಂದೂ ಕಥೆಯಿದೆ.

ಕೆಲವರಂತೂ ಸೇಕೋ ಕಣಿವೆಯ ಗರ್ಭದಲ್ಲಿ ಇಂದಿಗೂ ಆ ರತ್ನ ಜ್ವಲಿಸುತ್ತಿದೆಯೆಂದೂ ಎಷ್ಟೋ ಜನರು ಅದರ ನೆಳೆಮಿಂಚಿನ ಕಾಂತಿಯನ್ನು ಕಂಡಿದ್ದಾರೆಂದೂ ನಂಬಿಕೆಯಿಟ್ಟುಕೊಂಡಿದ್ದಾರೆ. ಸ್ಫಟಿಕಗಿರಿಯಿಂದ ಅನೇಕ ಮೈಲಿ ದೂರದಲ್ಲಿದ್ದರೂ ನನಗೇನೋ ಅದರ ನೆತ್ತಿಯಲ್ಲಿ ಅದ್ಭುತವಾದ ಪ್ರಭೆ ಕಾಣಿಸಿದೆ. ಕವಿಗೆ ಸಹಜವಾದ ನಂಬಿಕೆಯಿಂದ ನಾನು ಆ ರತ್ನದ ಕೊನೆಯ ಅನ್ವೇಷಕನಾಗಿ ಹೊರಟಿದ್ದೇನೆ.

— —

# ರಿಪ್ ವಾನ್ ವಿಂಕಲ್

ಹಡ್ಸನ್ ನದಿಯ ಮೇಲೆ ಪ್ರಯಾಣ ಮಾಡಿದವರಿಗೆಲ್ಲರಿಗೂ ಕಾಟ್ಸ್ಕಿಲ್ ಪರ್ವತದ ನೆನಪಿರಬೇಕು. ಅದು ಅಪಲೇಚಿಯ ಶ್ರೇಣಿಯಿಂದ ಕವಲೊಡೆದು ಸುತ್ತಮುತ್ತ ಇರುವ ಪ್ರಾಂತವನ್ನೆಲ್ಲಾ ಕೃಪಾದೃಷ್ಟಿಯಿಂದ ಕಾಯುತ್ತಾ ನದಿಯ ಎಡಭಾಗದಲ್ಲಿ ಉನ್ನತವಾಗಿ ನಿಂತಿದೆ. ಆದರ ಮೇಲೆ ಬಣ್ಣಗಳು ಆಡಿ ರೂಪಾಂತರ ಹೊಂದುವುದೇ ಬಹು ಸುಂದರವಾದ ಗಾರುಡಿಯೆನ್ನಬಹುದು. ಋತು ಬದಲಾಯಿಸಿದರೆ, ಹವ ಬದಲಾಯಿಸಿದರೆ, ಕೊನೆಗೆ ಒಂದು ಘಂಟೆ ಹೋಗಿ ಮತ್ತೊಂದು ಬಂದರೆ—ಆ ಬಣ್ಣದ ಸೌಂದರ್ಯವೂ ಬದಲಾಯಿಸುವುದು. ಆ ಪ್ರಾಂತದ ಹೆಂಗಸರೆಲ್ಲರಿಗೂ ಅದು ಹವ ಅಳೆಯುವ ಯಂತ್ರವೆನ್ನವೆನ್ನಬಹುದು. ಮೋಡವಿಲ್ಲದೆ ಸ್ವಚ್ಛವಾದ ದಿನವಾದರೆ ಪರ್ವತದ ಮೇಲೆ ನೀಲಿಯ ಅಥವಾ ನೀಲಿಗೆಂಪಿನ ಹೊದಿಕೆ ಬಿದ್ದು, ಆಕಾಶದ ಹಿನ್ನೆಲೆಯಲ್ಲಿ ಅದರ ರೂಪರೇಖೆಗಳು ಸ್ಫುಟವಾಗಿ ಅಚ್ಚೊತ್ತಿದಂತೆ ಕಾಣುವುವು. ಆದರೆ ಕೆಲವು ವೇಳೆ ಸುತ್ತಲಿನ ಆಕಾಶವೆಲ್ಲಾ ನಿರ್ಮಲವಾಗಿದ್ದರೂ ಅದರ ಶಿಖರಗಳ ಮೇಲೆ ಮಾತ್ರ ಅರೆಬಿಳುಪಿನ ಮೋಡಗಳು ಸೇರಿ ಸಂಜೆಯು ಹೊಂಬೆಳಕನ್ನು ಕದ್ದು ಪರ್ವತಕ್ಕೊಂದು ಕಿರೀಟವನ್ನು ಕಲ್ಪಿಸುವುವು.

ಗಂಧರ್ವರ ವಿಹಾರಕ್ಕೆ ಯೋಗ್ಯವಾದ ಆ ಬೆಟ್ಟದ ತಪ್ಪಲಿನಲ್ಲಿ ಮೈದಾನದ ಹಸುರಿನೊಡನೆ ಮೇಲ್ಭಾಗದ ನೀಲಿಯು ಬೆರೆಯುವುದು. ಅಲ್ಲಿಯ ಮರಗಳ ನಡುವೆ ಒಂದು ಹಳ್ಳಿ ನದಿಯ ಮೇಲಿಂದ ನೋಡಿದರೆ ಮನೆಗಳಿಂದ ಗುಂಗುರು ಗುಂಗುರಾಗಿ ಹೊಗೆಯೇಳುವುದು ಕಾಣುತ್ತದೆ. ಡಚ್ಚರು ಆ ಪ್ರಾಂತಕ್ಕೆ ವಲಸೆ ಬಂದ ಹೊಸದರಲ್ಲಿ ಹಾಲೆಂಡಿನಿಂದಲೇ ಹಳದಿಯ ಇಟ್ಟಿಗೆಗಳನ್ನು ತಂದು ಅಲ್ಲಿಯ ಕವಳಿಗೆ ಮನೆಗಳನ್ನು ಕಟ್ಟಿದರು. ಅಂಥದೊಂದು ಹಳೆಯ ಮುರುಕು ಮನೆಯಲ್ಲಿ ರಿಪ್ ವಾನ್ ವಿಂಕಲ್ ಎಂಬ ಸರಳಮನಸ್ಸಿನ ಗೃಹಸ್ಥನಿದ್ದ. ಆಗ

ಅಮೆರಿಕ ಇನ್ನೂ ಬ್ರಿಟನ್ನಿನ ಅಧೀನದಲ್ಲೇ ಇತ್ತು. ರಿಪ್ಪನ ಪೂರ್ವಿಕರು ಪೀಟರ್ ಸ್ಟೈವಸಾಂತನೊಡನೆ ಕ್ರಿಸ್ಟಿನ ಕೋಟೆಯ ಮುತ್ತಿಗೆಯಲ್ಲಿ ಭಾಗವಹಿಸಿ ವೀರರೆಂದು ಹೆಸರು ಪಡೆದವರು. ಆದರೆ ಅವನ ಪಾಲಿಗೆ ಹಿಂದಿನವರ ಕ್ಷಾತ್ರತೇಜಸ್ಸು ಏನೇನೂ ಬಂದಿರಲಿಲ್ಲ. ಮೊದಲೇ ಹೇಳಿದಂತೆ ಅವನದು ಬಹಳ ಸರಳ ಸ್ವಭಾವ. ನೆರೆಹೊರೆಯವರಿಗೆ ಉಪಕಾರಿ; ಆದರೆ ಮನೆಯಲ್ಲಿ ಮಾತ್ರ ಹೆಂಡತಿಯ ಕೈಗೊಂಬೆ. ಅವನಿಗೆ ಎಲ್ಲರ ವಿಶ್ವಾಸವನ್ನೂ ಗಳಿಸಿಕೊಟ್ಟಿದ್ದ ನಮ್ರತೆಯೂ ಸಾಧು ಸ್ವಭಾವವೂ ಹೆಂಡತಿಯ ಪ್ರಸಾದವೇ ಇರಬಹುದು. ಅಂಕೆಯಲ್ಲಿಟ್ಟು ಬುದ್ಧಿ ಕಲಿಸುವ ಗಯ್ಯಾಳಿ ಹೆಂಡತಿ ಮನೆಯಲ್ಲಿದ್ದರೆ, ಅಂಥವರು ಯಾರೊಡನೆಯೂ ಜಗಳಕ್ಕೆ ನಿಲ್ಲದೆ ಹೊಂದುವಣಿಯಿಂದ ನಡೆದುಕೊಳ್ಳುತ್ತಾರೆ. ಹೆಂಡತಿಯ ಕೋಪದ ಜ್ವಾಲೆಗೆ ಸಿಕ್ಕಿ ಅವರ ಕಾಠಿನ್ಯವೆಲ್ಲಾ ನಾಶವಾಗುತ್ತದೆ; ಸ್ವಭಾವ ಮೆದುವಾಗುತ್ತದೆ. ತಾಳ್ಮೆಯನ್ನೂ ಸಹನಶಕ್ತಿಯನ್ನೂ ಕಲಿಸುವುದಕ್ಕೆ ಅಂಥ ಮನೆಯೇ ಅತ್ಯುತ್ತಮವಾದ ಶಾಲೆ. ಪರದೆಯಲ್ಲಿ ಹೆಂಡತಿ ಕೊಡುವ ಉಪನ್ಯಾಸಗಳಿಗಿಂತ ಹೆಚ್ಚಿನ ನೀತಿ ಬೋಧೆ ಮತ್ತೆಲ್ಲಿ ದೊರೆತೀತು! ಈ ದೃಷ್ಟಿಯಿಂದ ನೋಡಿದರೆ ಗಯ್ಯಾಳಿಯಾದ ಹೆಂಡತಿಯಿರುವುದೂ ಒಂದು ಭಾಗ್ಯ. ಈ ವಿಷಯದಲ್ಲಿ ರಿಪ್ಪನಿಗೆ ಏನೇನೂ ಕೊರತೆಯಿರಲಿಲ್ಲ.

ಹಳ್ಳಿಯ ಇತರ ಹೆಂಗಸರಿಗೆಲ್ಲಾ ಅವನನ್ನು ಕಂಡರೆ ಬಹಳ ವಿಶ್ವಾಸ. ಹೆಂಗಸರಿಗಿರುವ ಒಂದು ಒಳ್ಳೆಯ ಗುಣವೆಂದರೆ—ಗಂಡ ಹೆಂಡಿರಿಗೆ ಜಗಳವಾದರೆ ಅವರು ಯಾವಾಗಲೂ ಗಂಡಸಿನ ಪಕ್ಷವನ್ನೇ ವಹಿಸುವುದು. ರಿಪ್ಪನ ಮನೆಯಲ್ಲಿ ಎಂದು ಜಗಳವಾದರೂ ಅವರು ರಿಪ್ಪನ ಪಕ್ಷ ವಹಿಸಿ ತಪ್ಪೇನಿದ್ದರೂ ಹೆಂಡತಿಯದೆಂದು ಆ ದಿನ ಸಂಜೆ ತಮ್ಮ ಚರ್ಚಾಕೂಟದಲ್ಲಿ ನಿರ್ಣಯ ಮಾಡುವರು. ಹಳ್ಳಿಯ ಮಕ್ಕಳಿಗೂ ಅವನು ಪ್ರಾಣಸ್ನೇಹಿತ; ಅವನನ್ನು ಕಂಡೊಡನೆ ಸಂತೋಷದಿಂದ ಕುಣಿಯುತ್ತಾ ಬಂದು ಮುತ್ತಿಕೊಳ್ಳುವರು. ರಿಪ್ ಅವರಿಗೆ ದೆವ್ವಗಳ ಕಥೆಯನ್ನೂ ಇಂಡಿಯನ್ ಜನರ ಕಥೆಯನ್ನೂ ಹೇಳುವನು; ಆಟದ ಸಾಮಾನು ಮಾಡಿಕೊಟ್ಟು, ಅವರೊಡನೆ ಗೋಲಿ ಆಡಿ, ಪಟ

ಹಾರಿಸಿ ಅವರನ್ನು ಕುಣಿಸುವನು. ಅವನ ಹಿಂದೆ ಯಾವಾಗಲೂ ಮಕ್ಕಳ ಗುಂಪು ಇದ್ದೇ ಇರುವುದು. ಅವನ ಅಂಗಿ ಎಳೆಯುವನೊಬ್ಬ, ಬೆನ್ನಮೇಲೆ ಹತ್ತುವನೊಬ್ಬ, ಜೇಬಿಗೆ ಕೈಹಾಕುವನೊಬ್ಬ—ಅವನು ವಯಸ್ಸಿನಲ್ಲಿ ದೊಡ್ಡವನೆಂಬ ಭಾವನೆಯೇ ಯಾರಿಗೂ ಬಂದಂತೆ ತೋರಲಿಲ್ಲ. ರಿಪ್ ಬೀದಿಯಲ್ಲಿ ಬಂದರೆ ಯಾವುದೊಂದು ನಾಯಿ ಸಹ ಬೊಗಳುತ್ತಿರಲಿಲ್ಲ.

ತನಗೆ ಲಾಭದಾಯಕವಾದ ಕೆಲಸವೊಂದಕ್ಕೂ ಅವನ ಮೈ ಬಗ್ಗುತ್ತಿರಲಿಲ್ಲ. ಇದೇ ಅವನ ಸ್ವಭಾವದಲ್ಲಿದ್ದ ಮುಖ್ಯವಾದ ದುರ್ಗುಣ. ಕಷ್ಟಪಟ್ಟು ಹಟಹಿಡಿದು ಕೆಲಸ ಮಾಡಲಾರನೆಂದಲ್ಲ. ದೊಡ್ಡ ಗಾಳ ಹಿಡಿದು ಹಗಲೆಲ್ಲಾ ತುಟಿಪಿಟಕ್ಕೆನ್ನದೆ ನದಿಯ ದಡದಲ್ಲಿ ಕೂತಿರುವನು, ಮೀನು ಬರಲಿ ಬರದಿರಲಿ. ಭಾರವಾದ ಬಂದೂಕವನ್ನು ಹೆಗಲ ಮೇಲೆ ಹೊತ್ತು ಘಂಟೆಗಟ್ಟಲೆ ಕಾಡುಮೇಡುಗಳಲ್ಲೂ ಬೆಟ್ಟಗುಡ್ಡಗಳಲ್ಲೂ ಸುತ್ತಿ ಕೊನೆಗೆ ಒಂದೆರಡು ಅಳಿಲನ್ನೊ ಪಾರಿವಾಳವನ್ನೋ ಮನೆಗೆ ತರುವನು. ನೆರೆಹೊರೆಯುವರು ಸಹಾಯ ಬೇಡಿದರೆ ಎಷ್ಟು ಶ್ರಮ ವಾದರೂ ಹಿಂಜರಿಯದೆ ಹೆಗಲು ಕೊಡುವನು. ಯಾರ ಮನೆಯಲ್ಲಾ ದರೂ ಧಾನ್ಯ ಬಡಿಯಬೇಕಾದರೆ, ಕಲ್ಲುಬೇಲಿ ಕಟ್ಟಬೇಕಾದರೆ ರಿಪ್ ಸೊಂಟಕಟ್ಟಿ ಸಿದ್ಧವಾಗಿರುವನು. ತಮ್ಮ ಸೋಮಾರಿ ಗಂಡಂದಿರು ಮಾಡದೆ ಬಿಟ್ಟ ಕೆಲಸವನ್ನೆಲ್ಲಾ ಹೆಂಗಸರು ರಿಪ್ಪನಿಗೆ ವಹಿಸುವರು. ಒಟ್ಟಿನಲ್ಲಿ ಹೊರಗಿನವರ ಕೆಲಸವೇನಿದ್ದರೂ ರಿಪ್ ಸಂತೋಷದಿಂದ ಮಾಡುವನು. ಆದರೆ ತನ್ನ ಮನೆಯನ್ನೂ ಜಮೀನನ್ನೂ ಅಣಿಯಾ ಗಿಟ್ಟುಕೊಳ್ಳುವುದು ಮಾತ್ರ ಅವನಿಗೆ ಅಸಾಧ್ಯ. ತನ್ನ ಜಮೀನಿಗಾಗಿ ದುಡಿದರೆ ಮೈನೋಯಿಸಿಕೊಳ್ಳುವುದು ಹೊರತು ಬೇರೆಯಾವ ಫಲವೂ ಇಲ್ಲವೆಂದು ಅವನ ಖಚಿತವಾದ ನಂಬಿಕೆ. "ಅದಕ್ಕೆ ಏನೋ ಶಾಪತಟ್ಟಿದೆ; ಅದರ ಹಣೆಯಬರಹವೇ ಕೆಟ್ಟದ್ದು ; ಅದಕ್ಕಾಗಿ ಎಷ್ಟು ಕಷ್ಟಪಟ್ಟರೂ ಹಾಳು" ಎನ್ನುವನು. ಅವನ ಜಮೀನಿನ ಬೇಲಿ ಬೆಳಗೆದ್ದರೆ ಉರುಟಿ ಕೊಳ್ಳುವುದು ; ಹಸು ಕಳ್ಳತಪ್ಪಿಸಿಕೊಂಡು ಹೋಗುವುದು, ಇಲ್ಲದಿದ್ದರೆ ನೆರೆಯವರ ಹೊಲಕ್ಕೆ ನುಗ್ಗಿ ಬೆಳೆಯನ್ನೆಲ್ಲಾ ಲೂಟಿಮಾಡುವುದು. ಇತ

ರರ ಪೊಲಕ್ಕಿಂತ ಅವನದ್ದರಲ್ಲಿ ಕಳೆ ಬೆಳೆಯುವುದು ಬಹಳ ಹುಲುಸು ; ಅವನು ಬೇಸಾಯಕ್ಕೆ ಹೊರಟ ಸಮಯದಲ್ಲಿ ಗುರುತೇಟನಂತೆ ಹುಚ್ಚು ಮಳೆ ಕರೆಯುವುದು ಹೀಗಾಗಿ. ಅವನಿಗೆ ಹಿರಿಯರಿಂದ ಬಂದ ಆಸ್ತಿ ವರ್ಷವರ್ಷಕ್ಕೂ ಕರಗಿ ಒಂದಾದ ಮೇಲೊಂದು ಎಕರೆ ಮಾರಿಹೋಗಿ, ಈಗ ಅಂಗೈಯಗಲ ಭೂಮಿಯಲ್ಲಿ ಸ್ವಲ್ಪ ಮುಸುಕಿನ ಜೋಳವೂ ಆಲೂಗೆಡ್ಡೆಯೂ ನಿಂತಿತ್ತು. ಆ ಬೆಳೆಯೂ ನೀರು ಗೊಬ್ಬರ ಸಾಲದೆ ಕಡ್ಡಿ ಕಡ್ಡಿ.

ಅವನ ಮಕ್ಕಳು ದಿಕ್ಕಿಲ್ಲದ ಅನಾಥರಂತೆ ಹರಕು ಚಿಂದಿ ಹಾಕಿಕೊಂಡು ಮನಸ್ಸಿ ತಿರುಗುತ್ತಿದ್ದವು. ಅವನ ಅಚ್ಚು ಇಳಿಸಿದಂತೆಯೇ ಇದ್ದ ಹಿರಿಯ ಮಗ—ಅವನ ಹೆಸರೂ ರಿಪ್—ಅಪ್ಪನ ಹಳೆಯ ಅಂಗಿಗಳನ್ನು ಪಡೆದಂತೆಯೇ ಅವನ ಕಲ್ಯಾಣಗುಣಗಳನ್ನೂ ಪಡೆದಿದ್ದನು. ತಂದೆ ಬೇಡವೆಂದು ಎಸೆದಿದ್ದ ಹಳೆಯ ಷರಾಯಿಯನ್ನು ಕಟ್ಟಿ, ನೆಲದ ಮೇಲೆ ಈಜಾಡದಂತೆ ಕೈಯಲ್ಲಿ ಎತ್ತಿಕೊಂಡು ಹಸುವಿನ ಹಿಂದೆ ಕರು ಅಲೆಯುವಂತೆ ತಾಯ ಹಿಂದೆ ತಿರುಗುತ್ತಿರುವನು.

ಇಂಥ ಸಂಸಾರದ ಅನನುಕೂಲಗಳೇನಿದ್ದರೂ ಮನಸ್ಸಿಗೆ ಹಚ್ಚಿಕೊಳ್ಳದೆ ಹೇಗೋ ಸಾವರಿಸಿಕೊಂಡು ಸುಖವಾಗಿರುವ ಸ್ವಭಾವ, ರಿಪ್ಪನದು. ರೊಟ್ಟಿ ಬೆಳ್ಳಗಿರಲಿ ಕೆಂಪಗಿರಲಿ, ಕಣ್ಣು ಮುಚ್ಚಿಕೊಂಡು ತಿಂದುಬಿಡುವನು - ವತನ್ನ ಮನಸ್ಸಿಗೆ ಚಿಂತೆ ತಪ್ಪಿ ಮೈಗೆ ಶ್ರಮ ತಪ್ಪಿದರೆ ಸರಿ. ಕೆಲಸಮಾಡಿ ರೂಪಾಯಿ ಸಂಪಾದಿಸಬಹುದಾದ ಕಡೆ ಕೆಲಸ ಮಾಡದೆ ಭಿಡಿಕಾಸು ಬಂದರೂ ಅವನಿಗೆ ತೃಪ್ತಿ. ಮನಸ್ಸಿಗೆ ತೋರಿದ ಹಾಗೆ ಇರಲೆಂದು ಬಿಟ್ಟುಬಿಟ್ಟರೆ ದಿನವೆಲ್ಲಾ ಎಲ್ಲಾದರೂ ಸಿಳ್ಳುಹಾಕುತ್ತಾ ಮಲಗಿ ಸಂತೋಷದಿಂದ ಕಾಲ ಕಳೆದುಬಿಡುವನು. ಆದರೆ ಅವನ ಹೆಂಡತಿ ಹಾಗೆ ಬಿಡುವವಳಲ್ಲ "ನೀನು ಸೋಮಾರಿ. ನಿನಗೆ ಸಂಸಾರದ ಕಡೆ ಲಕ್ಷ್ಯವೇ ಇಲ್ಲ, ನಿನ್ನಿಂದ ಮನೆ ಹಾಳಾಯಿತು" ಎಂದು ತುದಿಮೊದಲಿಲ್ಲವೆ ತನ್ನ ನಾಲಿಗೆ ಸೋತು ಅವನ ಕಿವಿ ಕಿವುಡಾಗುವವರೆಗೂ ಅನ್ನುತ್ತಿರುತ್ತಾಳೆ. ಬೆಳಗ್ಗೆ, ಮಧ್ಯಾಹ್ನ, ರಾತ್ರಿ—ಆಕ್ಷೇಪಣೆಗೆ ಬಿಡುವೇ ಇಲ್ಲ. ಅವನು ಏನು ಆಡಿದರೂ ತಪ್ಪು,

ಏನು ಮಾಡಿದರೂ ತಪ್ಪು; ಅವಳ ನಾಲಿಗೆಯಿಂದ ಹೊರಟ ವಾಕ್ಯವಾಹ ಅವನ ಮೇಲೆ ಕೊಚ್ಚಿ ಹರಿದೇ ಹರಿಯುವುದು. ಈ ಸಂಕಟಕ್ಕೆ ರಿಪ್ ಒಂದು ಪರಿಹಾರ ತಯಾರು ಮಾಡಿಕೊಂಡಿದ್ದ. ಪದೇ ಪದೇ ಉಪಯೋಗಿಸಿ ಅದು ಅಭ್ಯಾಸವಾಗಿತ್ತು. ಹೆಂಡತಿಯ ಉಪನ್ಯಾಸ ಸಾಗುತ್ತಿರುವಾಗ ಯಾವ ಮಾತನ್ನೂ ಆಡದೆ ತಲೆ ಅಲ್ಲಾಡಿಸಿ ಸುಮ್ಮನೆ ಆಕಾಶದ ಕಡೆ ನೋಡುತ್ತಾ ನಿಂತುಬಿಡುವುದು. ಇದರಿಂದ ಅವಳ ವಾಗ್ಝರಿ ಮತ್ತೂ ಜೋರಾಗುವುದು ಅನಂತರ ರಿಪ್ ಸೋಲುಮುಖ ಹಾಕಿಕೊಂಡು ಮನೆಯಿಂದ ಹೊರಟು ಹೋಗುವನು ಹೆಂಡತಿಯ ಅಂಕೆಯಲ್ಲಿರುವವನಿಗೆ ಶಾಂತಿ ದೊರಕಬೇಕಾದರೆ ಮನೆಯ ಹೊರಗೇ ತಾನೆ!

ಮನೆಯಲ್ಲಿ ರಿಪ್ಪನ ಪಕ್ಷಕ್ಕೆ ಸೇರಿದ ಪ್ರಾಣಿಯೆಂದರೆ ಅವನ ನಾಯಿ, " ತೋಳ ". ಅವನ ಮೈಗಳ್ಳತನಕ್ಕೆ ಅದು ಬೆಂಬಲ ಕೊಡುವುದೆಂದೂ ಅವನ ಅಪರಾಧಗಳಿಗೆಲ್ಲಾ ನಿಜವಾಗಿ ನೋಡಿದರೆ ಅದೇ ಕಾರಣವೆಂದೂ ಅವನ ಹೆಂಡತಿ ದೃಢವಾಗಿ ನಂಬಿದ್ದಳು. ಅದನ್ನು ಕಂಡರೇ ಉರಿದುಬೀಳುವಳು. ಸಾಧಾರಣವಾಗಿ ಮರ್ಯಾದಸ್ಥ ನಾಯಿಗಳಿಗೆ ಇರಬೇಕಾದ ಗುಣಗಳೆಲ್ಲ ತೋಳನಲ್ಲಿಯೂ ಇದ್ದವು. ರಿಪ್ಪನ ಹಿಂದೆ ಕಾಡಿನಲ್ಲಿ ಅಲೆಯುವಾಗ ಅದರ ಧೈರ್ಯಕ್ಕೆ ಎಣೆಯೇ ಇಲ್ಲ. ಆದರೆ ಸಂತತವಾಗಿ, ಸರ್ವವ್ಯಾಪಿಯಾಗಿ ಕೆಲಸಮಾಡುವ ಹೆಂಗಸಿನ ನಾಲಿಗೆಯ ಮುಂದೆ ಯಾವ ಧೈರ್ಯ ತಾನೆ ತಡೆದೀತು! ಮನೆಯ ಹೊಸಲ ಬಳಿ ಬಂದೊಡನೆ ತೋಳನ ತಲೆ ತಗ್ಗಿ, ಬಾಲ ತಾನಾಗಿಯೇ ಮುದುರಿಕೊಳ್ಳುವುದು ; ಮುಖಕ್ಕೆ ಫಾಸಿ ಶಿಕ್ಷೆ ಅನುಭವಿಸಲು ಹೋಗುವ ಖೈದಿಯ ಕಳೆ ಬರುವುದು. ಯಾವ ಘಳಿಗೆಯಲ್ಲಿ ಕಸಪೊರಕೆಯ ಅಥವಾ ಸೌದೆಯ ತುಂಡಿನ ಪೆಟ್ಟು ಬಿದ್ದೀತೋ ಎಂಬ ಭಯದಿಂದ ನಾಯಿ ಅವಳ ಮೇಲೆ ಸದಾ ಒಂದು ಕಣ್ಣು ಇಟ್ಟದ್ದು ಅವಳು ರೇಗಿದೊಡನೆ ಊಳಿಟ್ಟು ಓಡುವುದಕ್ಕೆ ಸಿದ್ಧವಾಗಿರುತ್ತಿತ್ತು.

ಹೀಗೆ ರಿಪ್ಪನ ದಾಂಪತ್ಯಜೀವನ ಸಾಗಿತು ; ವರ್ಷ ವರ್ಷಕ್ಕೂ ಅವನ ಸ್ಥಿತಿಯೂ ಕೆಡುತ್ತ ಬಂತ್ತು. ಯೌವನದಲ್ಲೇ ವಕ್ರವಾಗಿದ್ದ ಸ್ವಭಾವ ಮುಪ್ಪಿನಲ್ಲಿ ನೇರವಾಗುವುದಿಲ್ಲ. ಆಯುಧಗಳ ಮೊನೆ ಕಾಲ

ಕ್ರಮೇಣ ಸವೆಯುತ್ತದೆ; ಆದರೆ ಮೊದಲೇ ಹರಿತವಾದ ನಾಲಗೆ ಉಪಯೋಗಿಸಿದ ಹಾಗೆಲ್ಲಾ ನಾಣೆಹಿಡಿದಂತಾಗುತ್ತದೆ. ಮೊದಮೊದಲು ಮನೆಯಲ್ಲಿ ಮಾತಿನ ಬಿರುಗಾಳಿಯೆದ್ದೊಡನೆ ರಿಪ್ ಓಡಿಹೋಗಿ ದಿನ ವೆಲ್ಲಾ ತೆರೆದಿರುವ ಕ್ಲಬ್ಬಿನಲ್ಲಿ ಆಶ್ರಯ ಪಡೆಯುತ್ತಿದ್ದನು. ಆ ಸ್ಥಳ ದಲ್ಲಿ ಊರಿನ ಕೆಲಸಗಳ್ಳರು, ತಂಬಾಕುವೇದಾಂತಿಗಳು, ಬೃಹಸ್ಪತಿ ಗಳು—ಎಲ್ಲರೂ ಸಭೆ ಸೇರುವರು. ಸಭೆ ನಡೆಯುವುದು ಊರಿನಲ್ಲಿದ್ದ ಸಣ್ಣ ಹೋಟಲ ಮುಂದೆ ಒಂದು ಬೆಂಚಿನ ಮೇಲೆ. ಹೋಟಲಿನ ತಲೆ ಬಾಗಿಲಿನ ಮೇಲೆ ಮುಖದಲ್ಲಿ ರಕ್ತ ಚಿಮ್ಮುವಂತೆ ಕೆಂಪಗಿದ್ದ ಮೂರ ನೆಯ ಜಾರ್ಜ್ ದೊರೆಯ ಚಿತ್ರ. ಬೇಸಗೆಯ ದಿನವೆಲ್ಲಾ ಅಲ್ಲಿ ಮರದ ನೆರಳಿನಲ್ಲಿ ಕೂತು ಹಳ್ಳಿಯ ಜನರ ವಿಷಯ ಕಾಡುಹರಟೆ, ಇಲ್ಲದಿದ್ದರೆ ಎಂದೂ ಮುಗಿಯದ ಅರ್ಥವಿಲ್ಲದ ಕಥೆಗಳು. ಅಪರೂಪಕ್ಕೆ ಯಾರಾ ದರೂ ಪ್ರಯಾಣಿಕರು ಆ ಕಡೆ ಬಂದು ಆರು ತಿಂಗಳ ಹಿಂದಿನ ವೃತ್ತ ಪತ್ರಿಕೆಯನ್ನು ತಂದುಹಾಕಿದರೆ ಅದರ ಆಧಾರದ ಮೇಲೆ ಗಹನವಾದ ಚರ್ಚೆ ನಡೆಯುವುದುಂಟು. ಅದನ್ನು ಓದುವ ಕೆಲಸ ಊರಿನ ಮೇಷ್ಟ ರಿಗೆ ಸೇರಿದ್ದು. ಆತ ಬಹಳ ಬುದ್ಧಿವಂತ. ನಿಘಂಟನ್ನೇ ನಡುಗಿಸುವಂಥ ಪದ ಸಿಕ್ಕಿದರೂ ಎದೆಗುಂದುವವನಲ್ಲ. ಸಂಜೆಯ ಹೊತ್ತಿಗೆ ನಾಜೂ ಕಾದ ಬಟ್ಟೆಗಳನ್ನು ಧರಿಸಿ ಅಲ್ಲಿ ಕುಳಿತು ನಿಧಾನವಾಗಿ ಎಲ್ಲರಿಗೂ ಕೇಳುವಂತೆ ಪತ್ರಿಕೆಯನ್ನು ಓದುವನು. ಅನಂತರ ಎಷ್ಟೋ ತಿಂಗಳ ಕೆಳಗೆ ನಡೆದುಹೋದ ಆ ವಿಷಯಗಳ ಮೇಲೆ ಸಭಾಸದರೆಲ್ಲರೂ ತಮ್ಮ ಅಭಿಪ್ರಾಯಗಳನ್ನು ಮುಂಡಿಸುವರು. ಆ ಚರ್ಚೆಯನ್ನು ಕೇಳಿದರೆ ಎಂಥ ರಾಜಕಾರಣ ಪಟುವಿಗೂ ಬುದ್ಧಿ ಚುರುಕಾದೀತು.

ಊರಿನ ಮತ್ತು ಆ ಸಭೆಯ ಯಜಮಾನಿಕೆಯನ್ನು ಹೋಟಲಿನ ಮಾಲೀಕನಾದ ನಿಕೊಲಾಸ್ ವೆಡ್ಡರ್ ವಹಿಸಿಕೊಂಡಿದ್ದನು. ಬೆಳಗಿ ನಿಂದ ರಾತ್ರಿಯವರೆಗೂ ಅವನು ಹೋಟಲಿನ ಬಾಗಿಲಿನಲ್ಲೇ ಸ್ಥಾಪನೆ ಯಾಗಿರುವನು. ಬಿಸಿಲು ಏರಿದ ಹಾಗೆಲ್ಲಾ ಅದನ್ನು ತಪ್ಪಿಸಿಕೊಳ್ಳು ವುದಕ್ಕೆ ಸಾಕಾದಷ್ಟು ಮಾತ್ರ ನೆರಳಿನ ಕಡೆಗೆ ಸರಿಯುವನು. ಊರಿ ನವರು ಘಂಟೆ ಎಷ್ಟೆಂದು ತಿಳಿಯಬೇಕಾದರೆ ಗಡಿಯಾರ ನೋಡ

ಬೇಕಾಗಿಲ್ಲ; ವೆಡ್ಡರ್ ಕೂತಿರುವ ಸ್ಥಳವನ್ನು ಗಮನಿಸಿದರೆ ಸಾಕು. ಚರ್ಚಾಕೂಟದ ಕಾರ್ಯಕ್ರಮವೇನಿದ್ದರೂ ವೆಡ್ಡರ್ ಅದಕ್ಕೆ ಸೂತ್ರಧಾರಿ. ಅವನ ಮುಖವನ್ನು ತಂಬಾಕಿನ ನಾಳ ಸರ್ವದಾ ಅಲಂಕರಿಸಿರುವುದು. ನಾಳ ಸೇದುವುದೇ ಅವನ ಮುಖ್ಯ ಉದ್ಯೋಗ. ಅವನು ಮಾತಾಡುವುದೇ ಅಪರೂಪ. ಆದರೂ ಅವನ ಅನುಚರರು—ದೊಡ್ಡ ಮನುಷ್ಯರಿಗೆಲ್ಲ ಅನುಚರರಿದ್ದೇ ಇರಬೇಕಷ್ಟೆ—ಅವನ ಇಂಗಿತವನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲರು. ಪತ್ರಿಕೆ ಓದಿದ್ದರಲ್ಲೋ ಅಥವಾ ಚರ್ಚೆಯಲ್ಲೋ ತನ್ನ ಮನಸ್ಸಿಗೆ ಸರಿಬೀಳದೆ ಇರುವುದೇನಾನಾದರೂ ಬಂದರೆ ಅವನು ನಾಳ ಸೇದುವ ವೇಗ ಉಲ್ಬಣವಾಗುವುದು, ರೈಲಿನಿಂದ ಹಬೆ ಹೊರಟಂತೆ ಕ್ಷಣಕ್ಕೊಂದು ಸಲ ಬುಸುಗುಟ್ಟುತ್ತ ಹ್ರಸ್ವವಾಗಿ ಹೊರಡುವುದು. ಮನಸ್ಸಿಗೆ ಹರ್ಷವಾದಾಗ ನಿಧಾನವಾಗಿಯೂ ಶಾಂತವಾಗಿಯೂ ಹೊಗೆಯೆಳೆದುಕೊಂಡು ಅದನ್ನು ನೀಳವಾಗಿ ಹೊರಬಿಟ್ಟು ಸಣ್ಣ ಮೋಡವೊಂದನ್ನು ನಿರ್ಮಿಸುವನು. ಪೂರ್ಣವಾದ ಸಮ್ಮತಿಯನ್ನೂ ತೃಪ್ತಿಯನ್ನೂ ಸೂಚಿಸಬೇಕಾದರೆ ನಾಳವನ್ನು ಬಾಯಿಂದ ತೆಗೆದು ಅದರ ಸುವಾಸನೆಯ ಹೊಗೆ ಇನ್ನೂ ಮೂಗಿನ ಬಳಿ ಆಡುತ್ತಿರುವಾಗಲೇ ಗಂಭೀರವಾಗಿ ತಲೆದೂಗುವುದುಂಟು.

ನಿರ್ಭಾಗ್ಯ ರಿಪ್ಪನಿಗೆ ಈ ಕ್ಲಬ್ಬಿನ ಕೋಟೆಯಲ್ಲಿ ಸಹ ಆಶ್ರಯ ದೊರೆಯುವುದು ಕಷ್ಟವಾಗುತ್ತ ಬಂತು. ಅಲ್ಲಿ ಹುದುಗಿಕೊಂಡರೂ ಅವನಿಗೆ ತನ್ನ ಚಂಡಿಯ ಉಪದ್ರವ ತಪ್ಪಲಿಲ್ಲ. ಇದ್ದಕ್ಕಿದ್ದ ಹಾಗೆಯೇ ಅವಳು ಆ ಕ್ಲಬ್ಬಿನ ಶಾಂತವಾತಾವರಣದ ಮೇಲೂ ಧಾಳಿಯಿಟ್ಟು ಅಲ್ಲಿದ್ದವರೆಲ್ಲರನ್ನೂ ಚೀಮಾರಿ ಮಾಡಿದಳು. ನಿಕೊಲಾಸ್ ವೆಡ್ಡರನ ಘನತೆಗಾಂಭೀರ್ಯಗಳು ಸಹ ಆ ಗಯ್ಯಾಳಿಯ ನಾಲಗೆಗೆ ತಡೆ ಹಾಕಲಾರದೆ ಹೋದವು. ಗಂಡನ ಸೋಮಾರಿತನಕ್ಕೆ ಅವನ ಉತ್ತೇಜನವೇ ಕಾರಣವೆಂದು ಆಕೆ ಕಂಠೋಕ್ತವಾಗಿ ಹೇಳಿ ಅವನಿಗೂ ಹಿಡಿಶಾಪ ಹಾಕಿದಳು.

ರಿಪ್ಪನ ಸುತ್ತ ನಿರಾಶೆ ಕವಿಯಿತು. ಹೆಂಡತಿಯ ಅಬ್ಬರವನ್ನೂ

ಬೇಸಾಯದ ಕೆಲಸವನ್ನೂ ತಪ್ಪಿಸಿಕೊಳ್ಳಲು ಉಳಿದದ್ದು ಒಂದೇ ಮಾರ್ಗ—ಬಂದೂಕು ತೆಗೆದುಕೊಂಡು ಕಾಡಿಗೆ ಹೊರಟುಹೋಗುವುದು. ಅಲ್ಲಿ ಯಾವುದಾದರೂ ಮರದ ಕೆಳಗೆ ಕುಳಿತು, ಕಟ್ಟಿ ತಂದಿದ್ದ ತಿಂಡಿಯನ್ನು ತಾನೂ ತಿಂದು ನಾಯಿಗೂ ಕೊಡುವನು. " ಪಾಪ, ಯಜಮಾನಿ ನಿನ್ನನ್ನು ಕಂಡರೆ ಕೆಂಡಕಾರುತ್ತಾಳೆ ಅಲ್ಲವೆ, ತೋಳ? ಹೆದರಬೇಡ, ನಾನಿದ್ದೇನೆ. ನಾನು ಬದುಕಿರುವವರೆಗೆ ನಿನಗೆ ಒಂದು ತುಣುಕು ರೊಟ್ಟಿಯಾದರೂ ಸಿಕ್ಕಿಯೇ ಸಿಕ್ಕುತ್ತೆ " ಎಂದು ಅದರ ಮೈದಡವುವನು. ನಾಯಿಗಳು ಸಹಾನುಭೂತಿ ತೋರಿಸುವುದು ಸಾಧ್ಯವೋ ಇಲ್ಲವೋ ಕಾಣೆ. ತೋಳನೇನೋ ತನ್ನ ಬಾಲ ಅಲ್ಲಾಡಿಸಿ ಅವನ ಕಡೆಗೆ ಸಹಾನುಭೂತಿಯ ದೃಷ್ಟಿ ಬೀರುತ್ತಿತ್ತು.

ಸುಗ್ಗಿಯ ಕಾಲದಲ್ಲೊಂದು ದಿನ ಹೀಗೇ ಅಲೆಯುವುದಕ್ಕೆ ಹೊರಟು ರಿಪ್ಪನು ಯಾವುದೋ ಜ್ಞಾನದಲ್ಲಿ ಕಾಟ್‌ಸ್ಕಿಲ್ ಪರ್ವತದ ಮೇಲೆ ಬಹಳ ದೂರ ಹತ್ತಿ ಹೋದನು. ಅವನಿಗೆ ಅಳಿಲು ಬೇಟೆಯೆಂದರೆ ಬಹಳ ಇಷ್ಟ. ಆ ದಿನ ಎಷ್ಟೋ ಸಾರಿ ಅವನ ಬಂದೂಕಿನ ಶಬ್ದಕ್ಕೆ ಬೆಟ್ಟದ ಮೌನದಿಂದ ಮರುದನಿ ಹೊರಟಿತ್ತು. ಸೂರ್ಯ ಇಳಿಮುಖವಾಗುವ ಹೊತ್ತಿಗೆ ಅವನು ಒಂದು ಪ್ರಪಾತದ ತುದಿಯ ಬಳಿ ಕಾಡುಗಿಡಗಳು ಬೆಳೆದಿದ್ದ ಹಸುರುದಿನ್ನೆಯ ಮೇಲೆ ಆಯಾಸದಿಂದ ಏದುಸುರು ಕರೆಯುತ್ತಾ ಬಿದ್ದುಕೊಂಡನು. ಗಿಡಗಳ ಸಂದುಗಳಿಂದ ಪ್ರಪಾತದ ಕೆಳಗಿದ್ದ ಕಾಡುಪ್ರದೇಶ ಮೈಲಿಗಟ್ಟಲೆ ಕಾಣುತ್ತಿತ್ತು. ದೂರದಲ್ಲಿ, ಅವನಿದ್ದ ಸ್ಥಳದಿಂದ ಸಾವಿರಾರು ಅಡಿಗಳ ಕೆಳಗೆ, ಸಾವಧಾನವಾಗಿ ಹರಿದು ನೀಲಿಯ ಬೆಟ್ಟಗಳ ನಡುವೆ ಮರೆಯಾಗುವ ಹಡ್ಸನ್ ನದಿಯ ಗಂಭೀರಪ್ರವಾಹ. ಕನ್ನಡಿಯಂತೆ ಸ್ವಚ್ಛವಾದ ನದಿಯ ಮೇಲ್ಮೈಯಲ್ಲಿ ಒಂದೊಂದು ಕೆಂಪು ಮೋಡದ ಪ್ರತಿಬಿಂಬ. ಅಲ್ಲಲ್ಲಿ ಎದ್ದು ಕಾಣುವ ದೋಣಿಯ ಪಟಗಳು.

ಮತ್ತೊಂದು ಕಡೆಯಲ್ಲಿ ಭಯಂಕರವಾದ ಕಣಿವೆ. ಬೆಟ್ಟದ ಮೇಲಿನಿಂದ ಬಂಡೆಗಳು ಉರುಳಿ ಅದರ ತಳದಲ್ಲಿ ಗುಂಡು ಗುಂಡಾಗಿ ಬಿದ್ದಿದ್ದವು. ಆ ಪಾತಾಳಕ್ಕೆ ಸೂರ್ಯನ ಕಿರಣಗಳು ಭೇದಿಸಿಕೊಂಡು

ಹೋಗಿ ಅಲ್ಪ ಸ್ವಲ್ಪ ಬೆಳಕು ಕೊಡುವುದೇ ಕಷ್ಟ. ಈ ದೃಶ್ಯ ವನ್ನೆಲ್ಲಾ ನೋಡುತ್ತ ರಿಪ್ ಸ್ವಸ್ಥವಾಗಿ ಮಲಗಿದ. ಸಂಜೆ ಕಾಲಿಟ್ಟಿತು. ಬೆಟ್ಟಗಳು ತಮ್ಮ ನೀಳವಾದ ನೀಲಿಯ ನೆರಳನ್ನು ಕಣಿವೆಗಳ ಮೇಲೆ ಬೀಸಿದವು. ರಿಪ್ ಮನೆಯನ್ನು ತಲಪುವುದರೊಳಗೆ ಕತ್ತಲಾಗಿ ಎಷ್ಟೋ ಹೊತ್ತಾಗಿರುತ್ತದೆ. ಮನೆಯ ಹೊಸಲು ದಾಟಿದೊಡನೆ ಕ್ರುದ್ಧಳಾದ ಹೆಂಡತಿಯನ್ನು ಎದುರಿಸಬೇಕು. ಅದನ್ನು ನೆನೆದು ರಿಪ್ ನಿಟ್ಟುಸಿರು ಬಿಟ್ಟ.

ಎದ್ದು ಬೆಟ್ಟವನ್ನಿಳಿಯಬೇಕೆಂದಿರುವಷ್ಟರಲ್ಲಿ ಯಾರೋ ದೂರ ದಿಂದ ಕೂಗಿದ ಸದ್ದು ಕೇಳಿಸಿತು.

" ರಿಪ್ ವ್ಯಾನ್ ವಿಂಕಲ್ ! "

ತಿರುಗಿ ನೋಡಿದರೆ ಏನೂ ಕಾಣಲಿಲ್ಲ. ಬೆಟ್ಟದ ಪಕ್ಕದಲ್ಲಿ ಒಂಟಿಯಾಗಿ ಒಂದು ಕಾಗೆ ಮಾತ್ರ ಹಾರಾಡುತ್ತಿತ್ತು.

" ಇದೇನು ಭ್ರಾಂತಿ ಬಂತು, ನನ್ನ ಮನಸ್ಸಿಗೆ ! "ಎಂದುಕೊಂಡು ಇಳಿಯುವುದಕ್ಕೆ ತಿರುಗಿದ. ಮತ್ತೆ ಅದೇ ಸದ್ದು ಸಂಜೆಯ ಗಾಳಿಯಲ್ಲಿ ಘಂಟೆಯ ಸದ್ದಿನಂತೆ ಸ್ಫುಟವಾಗಿ ಕೇಳಿ ಬಂತು.

" ರಿಪ್ ವ್ಯಾನ್ ವಿಂಕಲ್ ! ರಿಪ್ ವ್ಯಾನ್ ವಿಂಕಲ್ !"

ಅದನ್ನು ಕೇಳಿದೊಡನೆ ನಾಯಿಯ ಬೆನ್ನ ಕೂದಲೆಲ್ಲ ನಿಮಿರಿ ನಿಂತಿತು. ಅದು ಮೆಲ್ಲನೆ ಗುರುಗುಟ್ಟಿ ಭಯದಿಂದ ಕಣಿವೆಯ ಕಡೆ ನೋಡುತ್ತಾ ಬಾಲವನ್ನು ಮುದುರಿಕೊಂಡು ರಿಪ್ಪನ ಮಗ್ಗುಲಿಗೆ ಬಂತು. ರಿಪ್ಪನನ್ನೂ ಏನೋ ಅವ್ಯಕ್ತವಾದ ಭಯ ಆವರಿಸಿತು. ನಾಯಿಯ ದೃಷ್ಟಿಯನ್ನು ಹಿಂಬಾಲಿಸಿ ತಾನೂ ಕಣಿವೆಯ ಕಡೆ ನೋಡಿದ. ಯಾವುದೋ ಹೊರೆಯನ್ನು ಹೊತ್ತು ಬೆನ್ನು ಬಗ್ಗಿ ಹೋಗಿದ್ದ ವಿಲಕ್ಷಣ ವ್ಯಕ್ತಿಯೊಂದು ಬಂಡೆಗಳ ಮೇಲೆ ಹತ್ತಿ ಬರುತ್ತಿತ್ತು. ಯಾರೂ ಬರ ದಿರುವ ಆ ನಿರ್ಜನ ಪ್ರದೇಶದಲ್ಲಿ ಮನುಷ್ಯರು ಕಣ್ಣಿಗೆ ಬಿದ್ದದ್ದೇ ಆಶ್ಚರ್ಯ. " ನನ್ನ ನೆರೆಯವರೇ ಯಾರಾದರೂ ಇರಬಹುದು. ಅವ ರಿಗೆ ಸಹಾಯವೇನಾದರೂ ಬೇಕೇ ನೋಡೋಣ " ಎಂದು ಆ ಕಡೆ ಹೊರಟ.

ಹತ್ತಿರ ಹೋಗಿ ಆ ಮನುಷ್ಯನ ವಿಚಿತ್ರ ರೂಪವನ್ನು ನೋಡಿದ ಮೇಲೆ ಮತ್ತೂ ಆಶ್ಚರ್ಯವಾಯಿತು. ಆತ ಸ್ವಲ್ಪ ಗಿಡ್ಡಾದ ಮನುಷ್ಯನಾದರೂ ವಿಶಾಲವಾದ ಎದೆ. ಪೊದೆಯಾಗಿ ಬೆಳೆದ ಕೂದಲು, ನರೆತ ಗಡ್ಡ—ಸ್ವಲ್ಪ ವಯಸ್ಸಾದವನು. ಹಿಂದಿನ ಕಾಲದ ಡಚ್ಚರ ಮಾದರಿಯ ಉಡುಪು ಹಾಕಿದ್ದನು. ನಡುವಿನಲ್ಲಿ ಪಟ್ಟಿಯುಳ್ಳ ಅಂಗಿ; ಮೊಣಕಾಲಿನವರೆಗೆ ಬಂದು ಅಲ್ಲಿ ಗೊಂಡೆಯ ದಾರದಿಂದ ಕಟ್ಟಿದ್ದ ದಗಲೆ ಷರಾಯಿ; ಅದರ ಎರಡು ಪಕ್ಕದಲ್ಲೂ ಗುಂಡಿಗಳು. ಅವನ ಹೆಗಲ ಮೇಲೆ ಮದ್ಯ ತುಂಬಿದಂತಿದ್ದ ಒಂದು ಪೀಪಾಯಿ ಇತ್ತು.

"ನನಗೆ ಸಹಾಯ ಮಾಡು, ಬಾ" ಎನ್ನುವಂತೆ ಆತ ಸನ್ನೆ ಮಾಡಿದ. ರಿಪ್ಪನಿಗೆ ಆತನ ಪರಿಚಯವಿಲ್ಲ. ಮನಸ್ಸು ಸ್ವಲ್ಪ ಹಿಂಜರಿಯಿತಾದರೂ ಅದನ್ನು ಮೇಲೆ ತೋರಿಸದೆ ಅವನ ಸಹಾಯಕ್ಕೆ ಹೋದ. ಒಬ್ಬರಿಗೊಬ್ಬರು ಒತ್ತಾಸೆ ಕೊಡುತ್ತಾ ಮಳೆಗಾಲದಲ್ಲಿ ನೀರು ಕೊರೆದಿದ್ದ ಇಕ್ಕಟ್ಟಾದ ದಾರಿಯೊಂದರಲ್ಲಿ ಹತ್ತಿದರು. ಆಗಿಂದಾಗ ದೂರದ ಗುಡುಗಿನಂತೆ ಬೆಟ್ಟಗಳಲ್ಲೆಲ್ಲಾ ಮೊಳಗುತ್ತಿದ್ದ ಏನೋ ಸದ್ದು ಕೇಳಿ ಬರುತ್ತಿತ್ತು. ಅವರು ಹೋಗುತ್ತಿದ್ದದ್ದು ಸ್ವಲ್ಪ ಎತ್ತರದಲ್ಲಿ ಎರಡು ಭಾರಿ ಬಂಡೆಗಳ ನಡುವೆ ಇದ್ದ ದೊಡ್ಡ ಕಂಡಿಯ ಕಡೆಗೆ. ಸದ್ದು ಅಲ್ಲಿಂದಲೇ ಬಂದಿರಬೇಕು, ಅಥವಾ ಅದರ ಬಳಿ ಇದ್ದ ಮತ್ತೊಂದು ಆಳವಾದ ಕಣಿವೆಯಿಂದಿರಬಹುದು. ಸಮುದ್ರ ಮಟ್ಟದಿಂದ ಬಹಳ ಎತ್ತರದಲ್ಲಿದ್ದ ಆ ಬೆಟ್ಟಗಳ ಮೇಲೆ ಕೆಲವು ವೇಳೆ ಇದ್ದಕ್ಕಿದ್ದ ಹಾಗೆ ಸಿಡಿಲು ಹೊಡೆದು ಮಳೆ ಬರುವುದುಂಟು. ಅದೇ ಸದ್ದಿರಬಹುದು ಎಂದುಕೊಂಡು ರಿಪ್ ಅರೆನಿಮಿಷ ನಿಂತು ಕೇಳಿ ಮತ್ತೆ ಮುಂದೆ ನಡೆದನು. ಕಣಿವೆಯನ್ನು ದಾಟಿದ ಮೇಲೆ ಇಬ್ಬರೂ ಮುಂದೆ ಸಿಕ್ಕಿದ ಕಂಡಿಯನ್ನು ಹಾದು ಸುತ್ತಲೂ ಬಂಡೆಗಳೆದ್ದು ನಡುವೆ ಅಂಗಳದಂತೆ ಕಾಣುತ್ತಿದ್ದ ಸ್ಥಳವೊಂದಕ್ಕೆ ಬಂದರು. ಎತ್ತರದಲ್ಲಿ ಬೆಳೆದಿದ್ದ ಮರದ ಕೊಂಬೆಗಳು ಆ ಅಂಗಳದ ಮೇಲೆ ಸುತ್ತಲೂ ಬಾಗಿದ್ದರಿಂದ ಆಕಾಶದ ನೀಲಿಯೂ ಸಂಜೆಗೆಂಪಿನ ಮೋಡಗಳೂ ಕೊಂಬೆಗಳ ನಡುವೆ ಅಲ್ಲಲ್ಲಿ ಮಾತ್ರ ಕಾಣುತ್ತಿದ್ದವು. ರಿಪ್ಪನೂ ಅವನ ಜೊತೆಗಾರನೂ ಮೌನವಾಗಿ

ಅಂಗಳವನ್ನು ಪ್ರವೇಶಿಸಿದರು. ದಾಗಿಯುದ್ದಕ್ಕೂ ರಿಪ್ಪನ ಮನಸ್ಸಿನಲ್ಲಿ "ಇಷ್ಟು ಎತ್ತರದಲ್ಲಿರುವ ಈ ನಿರ್ಜನಪ್ರದೇಶಕ್ಕೆ ಮದ್ಯ ಹೊತ್ತು ತಂದದ್ದರಿಂದ ಯಾವ ದೇವರಿಗೆ ಪ್ರೀತಿ!" ಎಂದು ಆಶ್ಚರ್ಯ. ಜೊತೆಯವನನ್ನು ಕೇಳೋಣವೆಂದರೆ ಅವನ ಸ್ವಭಾವ ಅರ್ಥವಾಗಲೊಲ್ಲದು; ಮುಖದಲ್ಲಿ ಸಲಿಗೆಗೆ ಅವಕಾಶ ಕೊಡದೆ ಭಯಹುಟ್ಟಿಸುವಂಥ ಗುಣವಿತ್ತು.

ಅಂಗಳಕ್ಕೆ ಬಂದ ಮೇಲೆ ಮತ್ತೂ ಆಶ್ಚರ್ಯಕರವಾದ ದೃಶ್ಯ ಕಣ್ಣಿಗೆ ಬಿತ್ತು. ಆದರ ಮಧ್ಯೆ ಮಟ್ಟಸವಾಗಿದ್ದ ಜಾಗದಲ್ಲಿ ವಿಲಕ್ಷಣವಾಗಿ ಕಾಣುತ್ತಿದ್ದ ಕೆಲವು ಜನರು 'ನೈನ್ ಪಿನ್ಸ್' ಎಂಬ ಚೆಂಡಾಟ ಆಡುತ್ತಿದ್ದರು. ಯಾವುದೋ ದೇಶದ ವಿಚಿತ್ರ ಮಾದರಿಯ ಬಟ್ಟೆ ಹಾಕಿದ್ದರು—ಡಬ್ಲೆಟ್ ಅಂಗಿ ಅಥವಾ ಜೆರ್ಕಿನ್ ಅಂಗಿ, ರಿಪ್ಪನ ಜೊತೆಗಾರನ ಷರಾಯಿನಂತೆ ದಗಲೆಯಾದ ಷರಾಯಿಗಳು; ಎಲ್ಲರ ಬೆಲ್ಟಿನಲ್ಲೂ ಉದ್ದವಾದ ಚೂರಿಗಳು. ಅವರ ಮುಖದಲ್ಲೂ ಹಾಗೇ ವೈಚಿತ್ರ್ಯ. ಒಬ್ಬನಿಗೆ ಅಗಲವಾದ ಮುಖ, ಉದ್ದವಾದ ಗಡ್ಡ, ಹಂದಿಗಿರುವಂತೆ ಸಣ್ಣ ಕಣ್ಣುಗಳು. ಇನ್ನೊಬ್ಬನ ಮುಖಕ್ಕೆಲ್ಲಾ ಬರಿಯ ಮೂಗೊಂದೇ ಕಾಣುತ್ತಿತ್ತು. ಅವನ ತಲೆಯ ಮೇಲೆ ಶಂಕುವಿನಾಕಾರದ ಬಿಳಿಯ ಟೋಪಿ—ಕೆಂಪು ಹುಂಜದ ಬಾಲದಿಂದ ಅಲಂಕರಿಸಿದ್ದು. ಪ್ರತಿಯೊಬ್ಬನಿಗೂ ಬೇರೆ ಬೇರೆ ಬಣ್ಣದ ಮತ್ತು ಆಕಾರದ ಗಡ್ಡ. ಸ್ವಲ್ಪ ಬೊಜ್ಜು ಬೆಳೆದು, ಹವದ ಹೊಡೆತದಿಂದ ಕಂದಿದ ಮುಖವುಳ್ಳವನೊಬ್ಬ ಆ ಗುಂಪಿನ ನಾಯಕನಂತೆ ಕಂಡನು. ಅವನು ಹಾಕಿದ್ದದ್ದು ಜರಿಯ ಅಂಗಿ; ಅಗಲವಾದ ಬೆಲ್ಟಿನಲ್ಲಿ ಚೂರಿಗೆ ಬದಲಾಗಿ ಕತ್ತಿ; ಗರಿ ಸಿಕ್ಕಿಸಿದ ಎತ್ತರವಾದ ಹ್ಯಾಟು, ಕೆಂಪು ಬಣ್ಣದ ಕಾಲುಚೀಲ. ಬಟ್ಟೆಯ ಹೂವಿನಿಂದ ಅಲಂಕರಿಸಿದ ಜೋಡುಗಳು. ರಿಪ್ ತನ್ನ ಹಳ್ಳಿಯ ಮೇಷ್ಟರು ವಾನ್‌ಷೇಕನ ಮನೆಯಲ್ಲಿ ಹಾಲೆಂಡಿನಿಂದ ತಂದಿದ್ದ ಹಳೆಯ ಫ್ಲೆಮಿಷ್ ಚಿತ್ರವೊಂದನ್ನು ನೋಡಿದ್ದನು. ಇಲ್ಲಿದ್ದವರೆಲ್ಲಾ ಆ ಚಿತ್ರದಲ್ಲಿ ಕಂಡ ಜನರಂತಿದ್ದರು.

ಇದೆಲ್ಲಕ್ಕಿಂತಲೂ ವಿಚಿತ್ರವಾಗಿ ತೋರಿದ್ದೆಂದರೆ ಅವರ ಮುಖ

ಭಾವ. ಅವರು ಆಟದಲ್ಲಿ ತೊಡಗಿದ್ದದ್ದು ವಿನೋದಕ್ಕಾಗಿರಬೇಕು. ಆದರೆ ಒಬ್ಬನೂ ಒಂದು ಮಾತನ್ನಾದರೂ ಆಡಲಿಲ್ಲ; ಎಲ್ಲರ ಮುಖದಲ್ಲೂ ಒಂದು ತರದ ಉಗ್ರಗಾಂಭೀರ್ಯ. ವಿನೋದಕ್ಕಾಗಿ ನೆರೆದವರು ಇಷ್ಟು ವ್ಯಗ್ರವಾಗಿದ್ದುದನ್ನು ರಿಪ್ ಎಲ್ಲೂ ಕಂಡಿರಲಿಲ್ಲ. ಆ ದೃಶ್ಯದ ಮೌನವನ್ನು ಒಡೆದದ್ದೆಂದರೆ ಅವರು ಚೆಂಡು ಉರುಳಿಸಿದ ಸದ್ದು. ಅದು ಮಾತ್ರ ಗುಡುಗಿನಂತೆ ಬೆಟ್ಟಗಳಿಂದ ಮರುದನಿ ಹೊರಡಿಸುತ್ತಿತ್ತು.

ರಿಪ್ಪನೂ ಅವನ ಜೊತೆಗಾರನೂ ಹತ್ತಿರ ಬಂದಾಗ ಅವರು ಥಟ್ಟನೆ ಆಟವನ್ನು ನಿಲ್ಲಿಸಿ, ಮುಖದಲ್ಲಿ ಯಾವ ಭಾವವೂ ತೋರದ ಪ್ರತಿಮೆಗಳಂತೆ ಅವರ ಕಡೆ ನೋಡಿದರು. ರಿಪ್ಪನ ಹೃದಯ ತಿರಿಚಿದಂತಾಗಿ ಕಾಲುಗಳು ಒಂದಕ್ಕೊಂದು ಹೊಡೆಯುವಂತೆ ನಡುಗಿದವು. ಜೊತೆಯಲ್ಲಿದ್ದವನು ಪೀಪಾಯಿನಲ್ಲಿದ್ದ ಮದ್ಯವನ್ನು ಕುಡಿಯುವ ಪಾತ್ರೆಗಳಿಗೆ ಸುರಿದು "ಅದನ್ನು ಎಲ್ಲರಿಗೂ ಕೊಡು" ಎನ್ನುವಂತೆ ಸನ್ನೆ ಮಾಡಿದನು. ನಡುಗುತ್ತಲೇ ರಿಪ್ ಎಲ್ಲರಿಗೂ ಪಾತ್ರೆಗಳನ್ನು ಕೊಟ್ಟನು. ಅವರು ಮೌನವಾಗಿಯೇ ಮದ್ಯ ಕುಡಿದು ಮತ್ತೆ ಆಟಕ್ಕೆ ತೊಡಗಿದರು.

ರಿಪ್ಪನ ಮನಸ್ಸಿನ ಶಂಕೆಯೂ ಭಯವೂ ಕ್ರಮೇಣ ಕಡಿಮೆಯಾಗುತ್ತಾ ಬಂದವು. ಯಾರೂ ತನ್ನ ಕಡೆ ನೋಡದಿದ್ದಾಗ ಮದ್ಯದ ರುಚಿನೋಡುವ ಸಾಹಸವನ್ನೂ ಮಾಡಿದನು. ಒಳ್ಳೆಯ ಹಾಲೆಂಡ್ ಮದ್ಯದಂತೆ ತೋರಿತು. ರಿಪ್ಪನಿಗೆ ಯಾವಾಗಲೂ ಬಾಯಾರಿಕೆ ಹೆಚ್ಚು. ಮತ್ತಷ್ಟು ಕುಡಿಯಬೇಕೆಂದು ಆಸೆಯಾಯಿತು. ನಾಲಿಗೆಗೆ ರುಚಿ ಇಳಿದ ಹಾಗೆಲ್ಲಾ ಮತ್ತೆ ಮತ್ತೆ ಕುಡಿದು, ಕಣ್ಣುಗಳು ತೇಲುವುದಕ್ಕಾರಂಭವಾಯಿತು. ಜ್ಞಾನ ತಪ್ಪಿ, ತಲೆಯನ್ನು ನೆಲಕ್ಕೊರಗಿಸಿ ಮಲಗಿದೊಡನೆಯೇ ಬಲವಾಗಿ ನಿದ್ದೆ ಬಂತು.

ಎಚ್ಚರವಾದಾಗ ತಾನು ಮೊದಲು ಆ ಕಣಿವೆಯ ಮುದುಕನನ್ನು ನೋಡಿದ್ದ ಸ್ಥಳದಲ್ಲಿ, ಅಂದರೆ ತಾನು ಮಲಗಿದ್ದ ಹಸುರು ದಿಣ್ಣೆಯ ಮೇಲೆ ಬಿದ್ದಿದ್ದನು. ಕಣ್ಣು ಹೊಸಕಿಕೊಂಡನು. ಬೆಳಗಿನ ಬಿಸಿಲಿನಲ್ಲಿ ಆಕಾಶವೆಲ್ಲಾ ನಿರ್ಮಲವಾಗಿತ್ತು. ಸಣ್ಣ ಸಣ್ಣ ಹಕ್ಕಿಗಳು ಪೊದೆಯಿಂದ

ಪೊದೆಗೆ ಕುಪ್ಪಳಿಸುತ್ತಾ ಸಿಳ್ಳು ಹೊಡೆಯುತ್ತಿದ್ದವು. ಎತ್ತರದಲ್ಲೊಂದು ಗರುಡ ಪರ್ವತದ ಗಾಳಿಯನ್ನು ಎದುರಿಸಿ ಸುತ್ತ ಹಾರುತ್ತಿತ್ತು. "ಇದೇ ನಿದು! ರಾತ್ರಿಯೆಲ್ಲಾ ಇಲ್ಲೇ ಮಲಗಿ ನಿದ್ದೆಮಾಡಿಬಿಟ್ಟೆನೆ!" ಎಂದು ಕೊಂಡು ಹಿಂದಿನ ಸಂಜೆಯ ಘಟನೆಗಳನ್ನು ನೆನಪಿಗೆ ತಂದುಕೊಂಡನು. ಪೀಪಾಯಿ ಹೊತ್ತು ತರುತ್ತಿದ್ದ ಆ ವಿಚಿತ್ರವ್ಯಕ್ತಿ—ಬೆಟ್ಟದ ಕಣಿವೆ—ಬಂಡೆಗಳ ನಡುವೆ ಇದ್ದ ಆ ಅಂಗಳ—"ನೈನ್‌ಪಿನ್ಸ್" ಆಡುತ್ತಿದ್ದ ಆ ಸುಟ್ಟಮೋರೆಯ ಗುಂಪು—ಮದ್ಯಪಾತ್ರೆ . . . . . . "ಅಯ್ಯೋ, ಆ ಮದ್ಯಪಾತ್ರೆ! ಆ ಸುಡುಗಾಡು ಮದ್ಯಪಾತ್ರೆಯಿಂದ ಕೆಟ್ಟೆ! ಮನೆ ಯವಳಿಗೆ ಏನು ನೆಪ ಹೇಳಲಿ!"

ತನ್ನ ಬಂದೂಕ ಎಲ್ಲೆಂದು ಸುತ್ತ ನೋಡಿದನು. ತಾನು ಪ್ರತಿದಿನ ಶುಭ್ರವಾಗಿ ಒರಸಿ ಎಣ್ಣೆ ಸವರಿ ಇಟ್ಟಿರುತ್ತಿದ್ದ ಬಂದೂಕ ಎಲ್ಲೂ ಕಾಣ ಲಿಲ್ಲ. ಅದಕ್ಕೆ ಬದಲಾಗಿ ಒಂದು ಹಳೆಯ ಬಂದೂಕ—ನಳ್ಳಿ ತುಕ್ಕು ಹಿಡಿದು, ಬೀಗ ಮುರಿದು, ಹಿಡಿಯೆಲ್ಲಾ ಗೆಜ್ಜಲು ತಿಂದು ಹೋಗಿದ್ದದ್ದು —ಹತ್ತಿರ ಬಿದ್ದಿತ್ತು. ಹಿಂದಿನ ದಿನ ಅಲ್ಲಿ ಆಟವಾಡುತ್ತಿದ್ದ ಆ ಗಂಭೀರ ವ್ಯಕ್ತಿಗಳು ತನಗೆ ಮೋಸಮಾಡಿ ಹೆಂಡ ಕುಡಿಸಿ, ಬಂದೂಕವನ್ನು ಕದ್ದಿರಬೇಕೆಂದು ಸಂದೇಹ ಬಂತು. ತೋಳನೂ ಎಲ್ಲೂ ಕಾಣಲಿಲ್ಲ. ಆದರೆ ಅದು ಅಳಿಲನ್ನೋ ಅಥವಾ ಯಾವುದಾದರೂ ಹಕ್ಕಿಯನ್ನೋ ಅಟ್ಟಿಸಿಕೊಂಡು ಹೋಗಿರಬಹುದು. ಸಿಳ್ಳು ಹೊಡೆದು ಅದರ ಹೆಸರನ್ನು ಕೂಗಿದನು; ಫಲವಿಲ್ಲ. ಅವನ ಸಿಳ್ಳಿಗೂ ಕೂಗಿಗೂ ಪ್ರತಿಧ್ವನಿ ಬಂತೇ ಹೊರತು ನಾಯಿ ಮಾತ್ರ ಬರಲಿಲ್ಲ. "ನಿನ್ನೆ ಮದ್ಯ ಕುಡಿದ ಅಂಗಳಕ್ಕೆ ಹೋಗಿ ನೋಡೋಣ. ಅಲ್ಲಿ ಆ ಜನರೇನಾದರೂ ಇದ್ದರೆ ಅವರಿಂದ ನನ್ನ ಬಂದೂಕನ್ನೂ ನಾಯಿಯನ್ನೂ ವಸೂಲು ಮಾಡಿಕೊಂಡು ಬರ ಬೇಕು" ಎಂದುಕೊಂಡು ಮೇಲೆದ್ದನು. ಮೈಕೈಯಿನ ಕೀಲುಗಳೆಲ್ಲಾ ಬಿಗಿಯಾಗಿ ಸೆಟೆದುಕೊಂಡಂತೆ ತೋರಿತು; ಎಂದಿನಂತೆ ಚಟುವಟಿ ಕೆಯೇ ಇಲ್ಲ. "ಬೆಟ್ಟದ ಮೇಲೆ ಬಂದು ರಾತ್ರಿಯೆಲ್ಲಾ ಬರಿಯ ನೆಲದ ಮೇಲೆ ಬಿದ್ದಿದ್ದರೆ ಆರೋಗ್ಯಕ್ಕೆ ತಡೆದೀತೆ! ಈ ಹುಚ್ಚುತನದಿಂದೇನಾ ದರೂ ವಾತ ಹಿಡಿದು ಮಲಗಿದರೆ ಸರಿ, ಮನೆಯ ಹೆಂಡತಿಯ ನಾಲಿಗೆಗೆ

ಬೇಕಾದಷ್ಟು ಕೆಲಸ ಸಿಕ್ಕಿದಂತಾಗುತ್ತೆ!" ಎಂದುಕೊಂಡು ಮೈ ಮುರಿದು, ಸ್ವಲ್ಪ ಕಷ್ಟದಿಂದ ಹಿಂದಿನ ದಿನ ಇಳಿದಿದ್ದ ಕಡೆಯೇ ಇಳಿದನು. ಮುದುಕನೊಡನೆ ಹೋಗಿದ್ದ ದಾರಿಯೇನೋ ಸಿಕ್ಕಿತು. ಆದರೆ ಅಲ್ಲೊಂದು ಪರ್ವತಪ್ರವಾಹ ಬಂಡೆಯಿಂದ ಬಂಡೆಗೆ ನೆಗೆದು ನೊರೆನೊರೆಯಾಗಿ ಹರಿದು ಕಣಿವೆಯನ್ನೆಲ್ಲಾ ತನ್ನ ಮರ್ಮರ ಶಬ್ದದಿಂದ ತುಂಬಿತ್ತು! ದಾರಿಯಲ್ಲೆಲ್ಲಾ ಬರ್ಚ್, ಸಸಾಫ್ರಾಸ್, ಹೇಸಲ್ ಗಿಡಗಳು ಬೆಳೆದಿದ್ದವು. ಅಲ್ಲದೆ ಗಿಡದಿಂದ ಗಿಡಕ್ಕೆ, ಮರದಿಂದ ಮರಕ್ಕೆ ಕಾಡು ಬಳ್ಳಿಗಳು ಹಬ್ಬಿ ಸುತ್ತಿಕೊಂಡು ಉದ್ದಕ್ಕೂ ಬಲೆಯನ್ನು ಹೆಣೆದಿದ್ದವು. ಹೊಳೆಯ ದಡದಲ್ಲೇ ಕಷ್ಟಪಟ್ಟು ಮುಗ್ಗರಿಸುತ್ತಾ, ಬಳ್ಳಿಗಳ ತೊಡರಿಗೆ ಸಿಕ್ಕಿ ಬಿದ್ದು ಏಳುತ್ತಾ ಮುಂದೆ ನಡೆದನು.

ಕೊನೆಗೆ ಬಂಡೆಗಳ ನಡುವೆ ಇಕ್ಕಟ್ಟಾದ ದ್ವಾರವಿದ್ದ ಬಳಿಗೂ ಬಂದನು. ಆದರೆ ಅಲ್ಲಿ ದ್ವಾರವೇ ಕಾಣಿಸಲಿಲ್ಲ. ಬಂಡೆಗಳು ಭೇದಿಸಲಾಗದ ಕೋಟೆಯಂತೆ ಭಯಂಕರವಾಗಿ ನಿಂತಿದ್ದವು. ಅವುಗಳ ಮೇಲಿನಿಂದ ಹೊಳೆ ಧುಮುಕಿ ಮರದ ನೆರಳಿನಿಂದ ಕತ್ತಲಾಗಿದ್ದ ಪಾತ್ರವನ್ನು ನಿರ್ಮಿಸಿಕೊಂಡಿತ್ತು. ಅಲ್ಲಿಂದ ಮುಂದೆ ಹೋಗಲು ಸಾಧ್ಯವಿಲ್ಲ. ಮತ್ತೆ ಸಿಳ್ಳು ಹಾಕಿ ತೋಳನನ್ನು ಕೂಗಿದನು. ಮೇಲೆ ಬಂಡೆಗಳ ತುದಿಯಲ್ಲಿ ಬೆಳೆದಿದ್ದ ಮರದ ಬಳಿ ಕೆಲಸವಿಲ್ಲದೆ ಹಾರಾಡುತ್ತಿದ್ದ ಕಾಗೆಗಳು ಮಾತ್ರ ಉತ್ತರಕೊಟ್ಟವು. ಎತ್ತರದಲ್ಲಿ ಯಾವ ಭಯವೂ ಇಲ್ಲದೆ ಕುಳಿತು ಅವು ರಿಪ್ಪನ ದುರವಸ್ಥೆಯನ್ನು ನೋಡಿ ಹಾಸ್ಯಮಾಡಿದಂತಿತ್ತು. ಈಗ ಮಾಡುವುದಾದರೂ ಏನು? ಬೆಳಗ್ಗೆ ಕಳೆದು ನಡುಹಗಲಾಗುವ ಸಮಯ ಬಂತು. ರಿಪ್ಪನಿಗೆ ರಾತ್ರಿಯೂ ಬೆಳಗ್ಗೆಯೂ ಆಹಾರವಿಲ್ಲದೆ ಹಸಿವಿನ ಸಂಕಟ ಬೇರೆ. ಬಂದೂಕವನ್ನೂ ನಾಯಿಯನ್ನೂ ಕಳೆದುಕಂಡು ತೆಪ್ಪನೆ ಹೊರಟುಹೋಗುವುದಕ್ಕೆ ಮನಸ್ಸು ಬಾರದು; ಮನೆಗೆ ಹೋದರೆ ಹೆಂಡತಿಯನ್ನು ಎದುರಿಸಬೇಕೆಂಬ ಭಯ. ಆದರೂ ಬೆಟ್ಟದಮೇಲೆ ಹಸಿವಿನಿಂದ ಸಾಯುವುದಕ್ಕಾಗುತ್ತದೆಯೆ? ತಲೆಅಲ್ಲಾಡಿಸಿ, ಆ ಹಳೆಯ ಬಂದೂಕವನ್ನೇ ಹೆಗಲಿಗೇರಿಸಿ, ಮನಸ್ಸಿನಲ್ಲಿ ಕಳವಳವೂ ಚಿಂತೆಯೂ ತುಂಬಿದ್ದರೂ ಮನೆಯ ಕಡೆಗೆ ಹೊರಟನು.

ಹಳ್ಳಿಯ ಹತ್ತಿರ ಬಂದಾಗ ಯಾರೋ ಜನರು ದಾರಿಯಲ್ಲಿ ಸಿಕ್ಕಿದರು. ಆದರೆ ಅವರೊಬ್ಬರ ಗುರುತೂ ಹತ್ತಲಿಲ್ಲ. ಸ್ವಲ್ಪ ಆಶ್ಚರ್ಯವಾಯಿತು. ಹಳ್ಳಿಯ ಸುತ್ತಮುತ್ತ ರಿಪ್ಪನಿಗೆ ಯಾರೂ ಅಪರಿಚಿತರಲ್ಲ. ಅವರ ಉಡುಪೂ ತಾನು ದಿನವೂ ನೋಡುತ್ತಿದ್ದ ಮಾದರಿಯದಲ್ಲ. ಅವರೂ ಕೂಡ ರಿಪ್ಪನನ್ನು ನೋಡಿ ಆಶ್ಚರ್ಯವನ್ನು ವ್ಯಕ್ತಪಡಿಸಿದರು; ಅಲ್ಲದೆ ಅವನನ್ನು ಕಂಡಾಗಲೆಲ್ಲಾ ತಮ್ಮ ಗಲ್ಲವನ್ನು ನೇವರಿಸಿಕೊಳ್ಳುವರು. ಮತ್ತೆ ಮತ್ತೆ ಜನರು ಹೀಗೆ ಮಾಡಿದ್ದನ್ನು ನೋಡಿ ರಿಪ್ ತಾನೂ ತನ್ನ ಗಲ್ಲವನ್ನು ನೋಡಿಕೊಂಡರೆ—ಅಲ್ಲಿ ಒಂದು ಅಡಿ ಉದ್ದದ ಗಡ್ಡ ಬೆಳೆದಿತ್ತು!

ಊರಿನ ಸೆರಗಿಗೇ ಬಂದನು. ಅವನ ಗಡ್ಡ ತೋರಿಸಿ ಹಾಸ್ಯಮಾಡಿ ಕೂಗುತ್ತಾ ಮಕ್ಕಳ ಸೈನ್ಯವೊಂದು ಹಿಂದೆ ಹೊರಟಿತು. ಅವನು ಹೋದ ದಾರಿಯಲ್ಲೆಲ್ಲಾ ನಾಯಿಗಳು ಬೊಗಳಿದವು—ಒಂದು ನಾಯಿಯೂ ಅವನು ನೋಡಿದ್ದಲ್ಲ ಹಳ್ಳಿಗೆ ಹಳ್ಳಿಯೇ ಮೊದಲಿಗಿಂತಲೂ ದೊಡ್ಡದಾಗಿಯೂ ಜನಭರಿತವಾಗಿಯೂ ಇದ್ದಂತೆ ತೋರಿತು. ತಾನು ಹಿಂದೆ ಎಂದೂ ನೋಡದಿದ್ದ ಮನೆಗಳ ಸಾಲು; ದಿನಾ ಕಣ್ಣಿಗೆ ಬೀಳುತ್ತಿದ್ದ ಮನೆಗಳು ಈಗ ಅದೃಶ್ಯವಾಗಿದ್ದವು. ಬಾಗಿಲುಗಳ ಮೇಲೆ ಅಪರಿಚಿತರ ಹೆಸರು, ಕಿಟಕಿಗಳಲ್ಲಿ ಅಪರಿಚಿತರ ಮುಖ—ಎಲ್ಲವೂ ಹೊಸತು! ತಾನೂ ತನ್ನ ಸುತ್ತಲಿನ ಪ್ರಪಂಚವೂ ಏನಾದರೂ ಮಾಯಮಂತ್ರಕ್ಕೆ ಸಿಕ್ಕಿಬಿದ್ದಿರಬಹುದೆ ಎಂಬ ಸಂಶಯದಿಂದ ಮನಸ್ಸು ಬೆದರಿತು. ಇದೇ ತಾನು ಹುಟ್ಟಿದ ಊರಲ್ಲವೆ! ನಿನ್ನೆ ತಾನೆ ಅಲ್ಲಿಂದ ಬೆಟ್ಟಕ್ಕೆ ಹೋಗಲಿಲ್ಲವೆ! ದೂರದಲ್ಲಿ ಅದೇ ಕಾಟ್ಸ್‌ಕಿಲ್ ಪರ್ವತ ಕಾಣುತ್ತದೆ, ಅದೇ ಬೆಳ್ಳಿಯಂತೆ ಹೊಳೆಯುವ ಹಡ್ಸನ್ ನದಿ! ಬೆಟ್ಟ ಕಣಿವೆಗಳೆಲ್ಲವೂ ಇದ್ದ ಕಡೆಯಲ್ಲೇ ಇವೆ. ಆದರೂ ರಿಪ್ಪನ ಮನಸ್ಸಿನಲ್ಲಿ ದೊಡ್ಡ ಗೊಂದಲವೆದ್ದಿತು. "ಆ ಹಾಳು ಮದ್ಯ! ಎಲ್ಲಾ ಅದರ ಫಲ, ನನ್ನ ತಲೆ ಕೆಡಿಸಿಬಿಟ್ಟಿದೆ!" ಎಂದುಕೊಂಡನು.

ತನ್ನ ಮನೆ ಕಂಡು ಹಿಡಿಯುವುದೂ ಸ್ವಲ್ಪ ಕಷ್ಟವಾಯಿತು ಯಜಮಾನಿತಿಯ ಕರ್ಕಶಧ್ವನಿ ಇನ್ನೇನು ಕೇಳಿಬರುತ್ತದೆ ಎಂದು ಹೆದರಿ

ಮೌನವಾಗಿ ಹತ್ತಿರ ಬಂದನು. ನೋಡಿದರೆ—ಮನೆಯೆಲ್ಲಾ ಪಾಳು ಬೀಳುತ್ತಿದೆ. ಛಾವಣಿ ಕುಸಿದು ಹೋಗಿದೆ; ಕಿಟಕಿಗಳೆಲ್ಲಾ ಮುರಿದಿವೆ; ಬಾಗಿಲು ಕೀಲು ತಪ್ಪಿಬಿದ್ದಿದೆ. ತೋಳನ ಹಾಗೆ ಕಾಣುತ್ತಿದ್ದ ನಾಯಿಯೊಂದು ಅಲ್ಲೇ ರಿಪ್ಪನನ್ನು ಕಂಡು ಗುರುಗುಟ್ಟುತ್ತಾ ಹಲ್ಲು ತೋರಿಸಿ ಮುಂದಕ್ಕೆ ಹೋಯಿತು. ರಿಪ್ಪನಿಗೆ ಇದು ಎಲ್ಲಕ್ಕಿಂತಲೂ ದೊಡ್ಡ ಪೆಟ್ಟು. "ನನ್ನ ನಾಯಿ ಸಹ ನನ್ನನ್ನು ಮರೆತುಬಿಟ್ಟಿದೆ" ಎಂದು ಬಿಸಿಯುಸಿರುಬಿಟ್ಟನು.

ಮನೆಯೊಳಕ್ಕೆ ಬಂದ. ಅವನ ಹೆಂಡತಿ ಮನೆಯನ್ನೇನೋ ಅಚ್ಚುಕಟ್ಟಾಗಿಯೇ ಇಡುವ ಪದ್ಧತಿ. ಈಗ ಮನೆ ಬರಿದು; ಪಾಳುಬಿಟ್ಟು ಎಲ್ಲರೂ ಹೊರಟು ಹೋದಂತಿತ್ತು. ಯಾರೂ ಇಲ್ಲದ್ದನ್ನು ಕಂಡು ತಾತ್ಕಾಲಿಕವಾಗಿಯಾದರೂ ಹೆಂಡತಿಯ ಹೆದರಿಕೆಯಿಲ್ಲವೆಂದು ಧೈರ್ಯವಾಯಿತು. ಅವಳನ್ನೂ ಮಕ್ಕಳನ್ನೂ ಹೆಸರಿಟ್ಟು ಕೂಗಿದನು. ಬರಿದಾದ ಕೋಣೆಗಳಲ್ಲೆಲ್ಲಾ ಅವನ ಕೂಗು ಮೊಳಗಿತು; ಮತ್ತೆ ಎಲ್ಲಾ ನಿಶಬ್ದ.

ಬೇಗ ಮನೆಯಿಂದ ಹೊರಬಿದ್ದು ತಾನು ಹಿಂದೆ ಕಾಲಕಳೆಯುತ್ತಿದ್ದ ಹಳ್ಳಿಯ ಹೋಟೆಲಿಗೆ ಹೋದನು. ಅದೂ ಮಾಯವಾಗಿತ್ತು. ಅದೇ ಸ್ಥಳದಲ್ಲಿ ಮುಟ್ಟಿದರೆ ಬೀಳುವಂತಿದ್ದ ದೊಡ್ಡ ಮರದ ಕಟ್ಟಡ ನಿಂತಿತ್ತು. ಅಲ್ಲಲ್ಲೇ ಒಡೆದು ಹೋಗಿದ್ದ ದೊಡ್ಡ ಕಿಟಕಿಗಳು; ಆ ಒಡಕನ್ನು ಹಳೆಯ ಬಟ್ಟೆ, ಹ್ಯಾಟು ಮುಂತಾದ್ದರಿಂದ ಮುಚ್ಚಿದ್ದರು. ಬಾಗಿಲಿನ ಮೇಲೆ "ಯೂನಿಯನ್ ಹೋಟೆಲು—ಜೋನಥನ್ ಡೂಲಿಟಲ್" ಎಂದು ಬರೆದಿತ್ತು. ಹಿಂದಿನ ಡಚ್ ಹೋಟೆಲಿಗೆ ನೆರಳುಕೊಡುತ್ತಿದ್ದ ದೊಡ್ಡ ಮರಕ್ಕೆ ಬದಲು ಈಗ ಎತ್ತರವಾದ ಬೆತ್ತಲೆ ಗಂಬವೊಂದು ನಿಂತಿತ್ತು. ಅದಕ್ಕೆ ಕೆಂಪು ಟೋಪಿಯಂತೆ ಏನೋ ಹಾಕಿದ್ದರು. ಕೆಲವು ನಕ್ಷತ್ರಗಳೂ ಪಟ್ಟಿಗಳೂ ಇದ್ದ ಬಾವುಟವೊಂದು ಅದರ ಮೇಲೆ ಹಾರಾಡುತ್ತಿತ್ತು. ಹಿಂದೆ ಅಲ್ಲಿ ನೆಮ್ಮದಿಯಾಗಿ ನಾಳ ಸೇದುವವರನ್ನು ನೋಡುತ್ತಿದ್ದ ಕೆಂಚು ಮುಖದ ಮೂರನೆಯ ಜಾರ್ಜನ ಚಿತ್ರವೇನೋ ಅಲ್ಲಿಯೇ ಇತ್ತು. ಆದರೆ ಅದರಲ್ಲೂ ವಿಚಿತ್ರ ಬದಲಾವಣೆಗಳು.

ಜಾರ್ಜನ ಕೆಂಪು ಅಂಗಿಗೆ ಈಗ ನೀಲಿ ಮತ್ತು ಹಳದಿ ಬಣ್ಣ ಬಂದಿತ್ತು. ಕೈಯಲ್ಲಿದ್ದ ರಾಜದಂಡಕ್ಕೆ ಬದಲು ಕತ್ತಿಯನ್ನು ಕೊಟ್ಟಿದ್ದರು. ತಲೆಯ ಮೇಲೆ ತ್ರಿಕೋಣಾಕಾರದ ಟೋಪಿ. ಚಿತ್ರದ ಕೆಳಗಿದ್ದ ಹೆಸರು ' ಮೂರನೆಯ ಜಾರ್ಜ್ ' ಅಲ್ಲ—" ಜಾರ್ಜ್ ವಾಷಿಂಗ್ಟನ್."

ಹೋಟಲಿನ ಬಾಗಿಲಿನಲ್ಲಿ ಮೊದಲಿನಂತೆ ಜನರೇನೋ ಸೇರಿದ್ದರು. ಆದರೆ ಒಬ್ಬರೂ ರಿಪ್ಪನಿಗೆ ಗುರುತಾದವರಲ್ಲ. ಜನರ ಸ್ವಭಾವದಲ್ಲೂ ದೊಡ್ಡ ಬದಲಾವಣೆಯಾದಂತೆ ತೋರಿತು. ಹಿಂದೆ ನೆಮ್ಮದಿಯಾಗಿ ಆಗ ತಾನೆ ನಿದ್ದೆಯಿಂದ ಎದ್ದಂತಿದ್ದ ಜನ ಈಗ ಏನೋ ಕೆಲಸದ ಆತುರದಲ್ಲಿರುವವರಂತೆ ಉತ್ಸಾಹದಿಂದ ಚರ್ಚೆಗೆ ತೊಡಗಿದ್ದರು. ಬಾಯಲ್ಲಿ ಉದ್ದವಾದ ನಾಳವನ್ನಿಟ್ಟುಕೊಂಡು ಕೆಲಸಕ್ಕೆ ಬಾರದ ಮಾತಾಡುವ ಬದಲು ಹೊಗೆಯ ಮೋಡಗಳ ಮೂಲಕವೇ ಸಂಭಾಷಣೆ ನಡೆಸುತ್ತಿದ್ದ 'ಜ್ಞಾನಿ ನಿಕೊಲಾಸ್ ವೆಡ್ಡರನ ಅಗಲವಾದ ಮುಖವೂ ಇಜ್ಜೋಡಿ ಗಲ್ಲವೂ ಕಣ್ಣಿಗೆ ಬೀಳದು. ಓಬಿರಾಯನ ಕಾಲದ ವೃತ್ತ ಪತ್ರಿಕೆಯಿಂದ ನೆರೆದವರಿಗೆಲ್ಲಾ ವರ್ತಮಾನ ಹಂಚುತ್ತಿದ್ದ ಮೇಷ್ಟರು ವಾನ್ ಬಮೆಲ್ ಸಹ ಇರಲಿಲ್ಲ. ಅವರಿಗೆ ಬದಲು ಸೆಣಕಲಾಗಿ ಪಿತ್ತ ರೋಗದಿಂದ ನರಳುವಂತಿದ್ದವನೊಬ್ಬ ಜೇಬಿನ ತುಂಬ ಹಸ್ತಪತ್ರಿಕೆಗಳನ್ನಿಟ್ಟುಕೊಂಡು, ' ನಾಗರಿಕರ ಹಕ್ಕು, ಚುನಾವಣೆ, ಕಾಂಗ್ರೆಸ್ಸಿನ ಸದಸ್ಯರು, ಸ್ವಾತಂತ್ರ್ಯ, ಬಂಕರ್ ಬೆಟ್ಟ, 1776ನೆ ಇಸವಿಯ ಶೂರರು' ಎಂದು ಏನೇನೋ ಒದರುತ್ತಿದ್ದನು. ರಿಪ್ಪನಿಗೆ ತಲೆ ಹುಚ್ಚು ಹಿಡಿದಂತಾಯಿತು. ಬೇಬಿಲನ್ ಭಾಷೆಯಲ್ಲಿ ಮಾತಾಡುತ್ತಿದ್ದರೆ ಹೇಗೋ ಹಾಗೆ, ಭಾಷಣಕಾರನ ಮಾತು ಅರ್ಥವಾಗಲೊಲ್ಲದು.

ರಿಪ್ಪನ ಉದ್ದನೆಯ ನರೆತ ಗಡ್ಡ, ತುಕ್ಕುಹಿಡಿದ ಬಂದೂಕ, ಒರಟು ಉಡುಪು, ಅವನ ಹಿಂದಿದ್ದ ಹೆಂಗಸರುಮಕ್ಕಳ ಸೈನ್ಯ—ಇವು ಹೋಟಲಿನ ಬಳಿ ಇದ್ದ ರಾಜಕಾರಣಿಗಳ ಗಮನವನ್ನು ಸೆಳೆದವು. ಎಲ್ಲರೂ ಕುತೂಹಲದಿಂದ ಅವನನ್ನು ಮುತ್ತಿಕೊಂಡು ನೋಡಲಾರಂಭಿಸಿದರು. ಭಾಷಣಕಾರ ಆತುರದಿಂದ ಅವನ ಬಳಿಗೆ ಬಂದು ಒಂದುಕಡೆಗೆ ಎಳೆದುಕೊಂಡು ಹೋಗಿ " ನಿಮ್ಮ ವೋಟು ಯಾವ ಪಕ್ಷಕ್ಕೆ ?" ಎಂದು

ಕೇಳಿದನು. ರಿಪ್ ಬೆಪ್ಪಾಗಿ ನೋಡುತ್ತ ನಿಂತ. ಇನ್ನೊಬ್ಬ ಗಿಡ್ಡಾಗಿದ್ದವನು ಅವನ ಕೈಹಿಡಿದೆಳೆದು, ಮೆಟ್ಟುಗಾಲು ಹಾಕಿ ನಿಂತು "ನೀವೇನು ಫೆಡರಲ್ ಪಕ್ಷವೋ ಅಥವಾ ಡೆಮೋಕ್ರಾಟ್ ಪಕ್ಷವೊ?" ಎಂದನು. ಮೊದಲಿನ ಪ್ರಶ್ನೆಯಂತೆ ಇದೂ ರಿಪ್ಪನಿಗೆ ಅರ್ಥವಾಗದ ಒಗಟೆ. ಅಷ್ಟರಲ್ಲೇ ಮೂರು ಮೂಲೆಯ ಟೋಪಿ ಹಾಕಿಕೊಂಡಿದ್ದ ಮುದುಕನೊಬ್ಬ ಮುಂದೆ ಬಂದ. ಅವನ ಮುಖದಲ್ಲಿ "ಇತರರಿಗಿಂತ ನಾನು ಬಲ್ಲವನು" ಎಂಬ ಹೆಮ್ಮೆಯೂ ಸ್ವಾಭಿಮಾನವೂ ಎದ್ದು ಕಾಣುತ್ತಿದ್ದವು. ಅವನು ನೆರೆದಿದ್ದ ಗುಂಪೆಲ್ಲವನ್ನೂ ಎಡಕ್ಕೂ ಬಲಕ್ಕೂ ತಳ್ಳಿಕೊಂಡು ಬಂದು ರಿಪ್ಪನ ಮುಂದೆ ಅಡ್ಡಗಾಲು ಹಾಕಿ ನಿಂತನು. ತನ್ನ ಕೋಲನ್ನು ನೆಲಕ್ಕೆ ಒತ್ತಿ ಹಿಡಿದು, ಒಂದು ಕೈಯನ್ನು ಸೊಂಟದ ಮೇಲಿಟ್ಟುಕೊಂಡು ಬಹಳ ಬಿಗಿಯ ಮೇಲೆ ಮಾತಾಡಿದನು.

"ಚುನಾವಣೆಗೆ ಬರಬೇಕಾದರೆ ಈ ಜನರನ್ನೆಲ್ಲಾ ಹಿಂದೆ ಕಟ್ಟಿಕೊಂಡು ಹೆಗಲ ಮೇಲೆ ಬಂದೂಕ ಹೊತ್ತು ಬರಬೇಕೆ? ನಿನಗೇನು ಹಳ್ಳಿಯಲ್ಲಿ ದೊಂಬಿ ಎಬ್ಬಿಸಬೇಕೆಂಬ ಉದ್ದೇಶವೋ?"

ರಿಪ್ ಬಹಳ ಹೆದರಿದ. "ಅಯ್ಯೋ ಸ್ವಾಮಿ, ನಾನು ಯಾವ ತಂಟೆಗೂ ಹೋಗದ ಮನುಷ್ಯ. ಇದೇ ಊರಿನವನು. ಜಾರ್ಜ್ ಪ್ರಭುಗಳಲ್ಲಿ ಭಕ್ತಿಯುಳ್ಳ ಪ್ರಜೆ! ದೇವರು ಪ್ರಭುಗಳಿಗೆ ಒಳ್ಳೆಯದು ಮಾಡಲೆಂದೇ ಪ್ರಾರ್ಥಿಸುವವ."

ಇದನ್ನು ಕೇಳಿದೊಡನೆಯೇ ದೊಡ್ಡ ಗಲಭೆ ಎದ್ದಿತು.

"ಓಹೋ, ಇವನು ಟೋರಿ! ಟೋರಿ! ಗೂಢಚಾರ! ಶತ್ರುಪಕ್ಷದ ಗೂಢಚಾರ! ಇವನನ್ನು ಒದ್ದೋಡಿಸಿ! ತೊಲಗು ಆಚೆಗೆ!"

ಮೂಲೆ ಟೋಪಿಯ ದೊಡ್ಡ ಮನುಷ್ಯನಿಗೆ ಅವರನ್ನೆಲ್ಲಾ ಹದ್ದಿನಲ್ಲಿಡುವುದು ಬಹಳ ಕಷ್ಟವಾಯಿತು. ಮತ್ತೆ ಈ ಗುರುತಿಲ್ಲದ ಅಪರಾಧಿಯ ಕಡೆ ತಿರುಗಿ ಮೊದಲಿಗಿಂತಲೂ ಹತ್ತುಪಾಲು ಗಡುಸಾದ ಧ್ವನಿಯಿಂದ ಕೇಳಿದ:

"ಇಲ್ಲಿ ನಿನಗೇನು ಕೆಲಸ? ಯಾರನ್ನು ನೋಡುವುದಕ್ಕೆ ಬಂದೆ?"

"ನನ್ನದೇನೂ ಅಪರಾಧವಿಲ್ಲ, ಸ್ವಾಮಿ. ಈ ಹೋಟಲಿನ ಬಳಿ

ಸೇರುತ್ತಿದ್ದ ನನ್ನ ಸ್ನೇಹಿತರನ್ನು ಹುಡುಕಿಕೊಂಡು ಬಂದೆ.” ರಿಪ್ ಬಹಳ ನಮ್ರನಾಗಿ ಉತ್ತರಕೊಟ್ಟ.

“ ಓಹೋ ! ಯಾರು, ನಿನ್ನ ಸ್ನೇಹಿತರು ? ಅವರ ಹೆಸರೇನು ? ”

ರಿಪ್ ಒಂದು ನಿಮಿಷ ಯೋಚನೆಮಾಡಿ ಕೇಳಿದ: “ನಿಕೊಲಾಸ್ ವೆಡ್ಡರ್ ಎಲ್ಲಿದ್ದಾನೆ ?”

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ಅನಂತರ ಮುದುಕನೊಬ್ಬ ಕೀಚಲು ದನಿಯಲ್ಲಿ ಹೇಳಿದ: “ನಿಕೊಲಾಸ್ ವೆಡ್ಡರ್! ಅವನು ಸತ್ತು ಸಮಾಧಿಯಾಗಿ ಹದಿನೆಂಟು ವರ್ಷವಾಯಿತು. ಚರ್ಚಿನ ಅಂಗಳದಲ್ಲಿ ಒಂದು ಹಲಗೆಯ ಮೇಲೆ ಅವನ ಹೆಸರು ಕೆತ್ತಿ ಇಟ್ಟಿದ್ದರು. ಈಗ ಅದೂ ಗೆಜ್ಜಲು ತಿಂದು ಹೋಯಿತು.’’

‘‘ ಬ್ರೋಮ್ ಡಚರ್ ಇದ್ದಾನೆಯೆ ?”

“ ಯುದ್ಧ ಷುರುವಾದಾಗ ಅವನು ಸೈನ್ಯಕ್ಕೆ ಸೇರಿದ. ಸ್ಟೋನಿ ಪಾಯಿಂಟ್‌ಬಳಿ ಹಲ್ಲಾ ಹತ್ತುತ್ತಿದ್ದಾಗ ಸತ್ತುಹೋದನೆಂದು ಯಾರೋ ಹೇಳಿದರು. ಹಡ್ಸನ್ ನದಿಯ ಮೇಲೆ ಬಿರುಗಾಳಿಗೆ ಸಿಕ್ಕಿ ಮುಳುಗಿ ಹೋದನೆಂದು ಇನ್ನೊಂದು ವರ್ತಮಾನ. ನನಗೆ ಸರಿಯಾಗಿ ಗೊತ್ತಿಲ್ಲ. ಅಂತೂ ಅವನು ಮತ್ತೆ ಹಳ್ಳಿಗೆ ಬರಲಿಲ್ಲ.”

“ ಮೇಷ್ಟ್ರು, ವಾನ್ ಬಮೆಲ್ ? ”

“ ಅವನೂ ಯುದ್ಧಕ್ಕೆ ಹೋಗಿ ಭಾರಿ ಜನರಲ್ ಆಗಿದ್ದ. ಈಗ ಕಾಂಗ್ರೆಸ್ ಸಭೆಯ ಸದಸ್ಯನಾಗಿದ್ದಾನೆ.”

ರಿಪ್ಪನಿಗೆ ಹೃದಯದ ತುಡಿತ ನಿಂತಹಾಗಾಯಿತು. ಊರಿನಲ್ಲೂ ತನ್ನ ಸ್ನೇಹಿತರಲ್ಲೂ ಎಷ್ಟೊಂದು ಬದಲಾವಣೆ! ಪ್ರಪಂಚದಲ್ಲಿ ತಾನು ಒಂಟಿಯಾಗಿ ನಿಂತಿದ್ದ. ತನ್ನ ಪ್ರಶ್ನೆಗೆ ಬಂದ ಉತ್ತರಗಳೂ ಅರ್ಥವಾಗಲೊಲ್ಲವು. ಯುದ್ಧವೆಲ್ಲಿಂದ ಬಂತು ? ಕಾಂಗ್ರೆಸ್ ಸಭೆಯೆಂದರೇನು ? ಹದಿನೆಂಟು ಇಪ್ಪತ್ತು ವರ್ಷಗಳ ಮಾತು ಬೇರೆ! ಮತ್ತೆ ಯಾವ ಸ್ನೇಹಿತನ ವಿಷಯ ಕೇಳುವುದಕ್ಕೂ ಧೈರ್ಯಬರದೆ ನಿರಾಶೆಯಿಂದ “ ರಿಪ್ ವಾನ್ ವಿಂಕಲ್‌ನನ್ನು ಗುರುತಿಸುವವರು ಒಬ್ಬರೂ ಇಲ್ಲವೆ ! ” ಎಂದು ಕೂಗಿಕೊಂಡ.

ಇಬ್ಬರು ಮೂವರು ಕೂಡಲೆ ಉತ್ತರಕೊಟ್ಟರು. "ಓ, ರಿಪ್ ವಾರ್ ವಿಂಕಲ್ಲೇ? ಇಲ್ಲೇ ಇದ್ದಾನಲ್ಲ! ಅಗೋ ಆ ಮರ ಒರಗಿಕೊಂಡು ನಿಂತಿದ್ದಾನಲ್ಲ, ಅವನೇ ರಿಪ್ ವಾರ್ ವಿಂಕಲ್."

ರಿಪ್ ತಿರುಗಿ ನೋಡಿದ. ತಾನು ಬೆಟ್ಟಕ್ಕೆ ಹೋದಾಗ ಹೇಗಿದ್ದನೋ ಹಾಗೇ ತದ್ವತ್ತಾಗಿ ಕಾಣುತ್ತಿದ್ದ, ಆ ಮನುಷ್ಯ. ಅದೇ ವೈಗಳ್ಳತನ, ಅದೇ ಚಿಂದಿ ಬಟ್ಟೆ. ಅವನನ್ನು ನೋಡಿದೊಡನೆ ರಿಪ್ಪನ ಮನಸ್ಸು ಸ್ವಾಧೀನ ತಪ್ಪಿಹೋಯಿತು. ತಾನು ಯಾರೆಂಬುದರ ತಿಳಿವಳಿಕೆ ಸಹ ಕೈಗೆ ಸಿಕ್ಕಲೊಲ್ಲದು. ತಾನು ತಾನೇಯೋ ಅಥವಾ ಮತ್ತೊಬ್ಬನೋ? ಅವನು ಈ ಪೇಚಿನಲ್ಲಿ ಸಿಕ್ಕಿ ಬಿದ್ದಿರುವಾಗ ಮೂರುಮೂಲೆ ಟೋಪಿಯ ಮನುಷ್ಯ ಮತ್ತೆ ಕೇಳಿದ:

"ನೀನು ಯಾರು? ನಿನ್ನ ಹೆಸರೇನು?"

ರಿಪ್ಪನಿಗೆ ಪೈತ್ಯ ಹಿಡಿದಂತಾಯಿತು. "ಭಗವಂತನೊಬ್ಬನೇ ಬಲ್ಲ, ಸ್ವಾಮಿ. ನಾನು ನಾನಲ್ಲ. ಬೇರೆ ಯಾವನೋ ಒಬ್ಬ. ಅಗೋ, ಅಲ್ಲಿದಾನಲ್ಲ, ಅವನೇ ನಾನು. ಅಲ್ಲ, ಅಲ್ಲ, ಅವನು ಬೇರೆ ಯಾವನೋ, ನನ್ನ ಹಾಗೆ ಆಗಿಬಿಟ್ಟಿದಾನೆ. ನಿನ್ನೆ ರಾತ್ರಿ ನಾನು ನಾನೇ ಆಗಿದ್ದೆ. ಆದರೆ ಬೆಟ್ಟದ ಮೇಲೆ ನಿದ್ದೆ ಬಂದುಬಿಟ್ಟಿತು. ಆಗ ನನ್ನ ಬಂದೂಕ ಕದ್ದುಬಿಟ್ಟರು. ಎಲ್ಲಾ ಬದಲಾಯಿಸಿ ಹೋಗಿದೆ. ನಾನೂ ಬದಲಾಯಿಸಿ ಬಿಟ್ಟಿದ್ದೇನೆ. ನಾನು ಯಾರೋ ಗೊತ್ತಿಲ್ಲ. ನನ್ನ ಹೆಸರೇನೋ ಹೇಳಲಾರೆ."

ಇದನ್ನು ಕೇಳಿ ಜನರೆಲ್ಲಾ ಒಬ್ಬರ ಮುಖ ಒಬ್ಬರು ನೋಡಿದರು; ತಲೆದೂಗಿ, ಅರ್ಥಪೂರಿತವಾಗಿ ಕಣ್ಣು ಮಿಟುಕಿಸಿ, ಬೆರಳಿನಿಂದ ಹಣೆ ಮುಟ್ಟಿಕೊಂಡರು. "ಬಂದೂಕ ತೆಗೆದಿಟ್ಟುಕೊಂಡರೆ ಒಳ್ಳೆಯದಲ್ಲವೆ? ಮುದುಕ ಏನಾದರೂ ಅನಾಹುತ ಮಾಡಿಬಿಟ್ಟಾನು!" ಎಂದು ಯಾರೋ ಪಿಸುಗುಟ್ಟಿದರು. ಇದನ್ನು ಕೇಳಿದೊಡನೆಯೇ ಮೂಲೆಟೋಪಿಯ ಸ್ವಾಭಿಮಾನಿ ಆತುರದಿಂದ ಗುಂಪಿನೊಳಗೆ ಹೋಗಿ ಸೇರಿಕೊಂಡ. ಈ ಸಂದಿಗ್ಧ ಸಮಯದಲ್ಲಿ ಲಕ್ಷಣವಾಗಿ ಚಟುವಟಿಕೆಯಾಗಿದ್ದ ಯುವತಿಯೊಬ್ಬಳು ಗಡ್ಡ ನರೆತ ಈ ಹೊಸ ಮನುಷ್ಯನನ್ನು ನೋಡುವುದಕ್ಕೆ ಗುಂಪಿನಿಂದ ಮುಂದೆ ಬಂದಳು. ಅವಳ ಕೈಯಲ್ಲಿದ್ದ ವೈಕೈ ತುಂಬಿದ ಮಗು ರಿಪ್ಪನ

ಮುಖ ನೋಡಿ ಅಳುವುದಕ್ಕೆ ಮೊದಲುಮಾಡಿತು.

"ಸುಮ್ಮನಿರು, ರಿಪ್. ಅಯ್ಯೋ ಹುಚ್ಚು ಮಗುವೆ, ಸುಮ್ಮನಿರಮ್ಮ. ಮುದುಕಯ್ಯ ನಿನ್ನ ಏನೂ ಮಾಡುಲ್ಲ!"

ಮಗುವಿನ ಹೆಸರು, ತಾಯಿಯ ಮುಖಛಾಯೆ, ಅವಳ ದನಿ, ಎಲ್ಲಾ ರಿಪ್ಪನ ಮನಸ್ಸಿಗೆ ಏನೋ ನೆನಪುಗಳನ್ನು ತಂದವು.

"ನಿನ್ನ ಹೆಸರೇನು, ತಾಯಿ?"

"ಜುಡಿತ್ ಗಾರ್ಡನಿಯರ್."

"ನಿನ್ನ ತಂದೆಯ ಹೆಸರು?"

"ನನ್ನ ತಂದೆಯೇ? ಪಾಪ! ಆತನ ಹೆಸರು ರಿಪ್ ವಾರ್ ವಿಂಕಲ್. ಆದರೆ ಅವನು ಬಂದೂಕ ಹೆಗಲ ಮೇಲೆ ಹಾಕಿಕೊಂಡು ಹೊರಟುಹೋಗಿ ಇಪ್ಪತ್ತು ವರ್ಷವಾಯಿತು. ಅಂದಿನಿಂದೀಚೆಗೆ ಅವನ ವರ್ತಮಾನವೇ ಇಲ್ಲ. ಅವನ ನಾಯಿ ಒಂಟಿಯಾಗಿ ಮನೆಗೆ ಬಂತು. ಅವನೇನು ಗುಂಡಿನಿಂದ ಆತ್ಮಹತ್ಯ ಮಾಡಿಕೊಂಡನೋ ಅಥವಾ ಇಂಡಿಯನ್ ಜನರೇನಾದರೂ ಸೆರೆಹಿಡಿದುಕೊಂಡು ಹೋದರೋ ಯಾರಿಗೂ ತಿಳಿಯದು. ಆಗ ನಾನಿನ್ನೂ ಚಿಕ್ಕ ಹುಡುಗಿ."

ರಿಪ್ ಕೇಳಬೇಕಾದದ್ದು ಒಂದು ಪ್ರಶ್ನೆ ಉಳಿದಿತ್ತು. ಅದನ್ನೂ ಕೇಳಿಬಿಟ್ಟನು, ನಡಗುವ ದನಿಯಿಂದ.

"ನಿನ್ನ ತಾಯಿ ಎಲ್ಲಿದ್ದಾಳೆ?"

"ಅವಳು ಸತ್ತು ಇನ್ನೂ ಹೆಚ್ಚು ದಿನವಾಗಿಲ್ಲ. ನ್ಯೂ ಇಂಗ್ಲೆಂಡಿನ ವ್ಯಾಪಾರಿಯೊಬ್ಬನ ಮೇಲೆ ರೇಗಿದಾಗ ಆಕೆಯ ರಕ್ತನಾಳ ಒಡೆದು ಪ್ರಾಣಹೋಯಿತು."

ಇದೊಂದು ವರ್ತಮಾನ ಕೇಳಿಯಾದರೂ ಮನಸ್ಸಿಗೆ ಹಿತವಾಯಿತು. ಇನ್ನು ಮನಸ್ಸನ್ನು ತಡೆಯುವುದಕ್ಕಾಗಲಿಲ್ಲ. ಮಗಳನ್ನೂ ಅವಳ ಮಗುವನ್ನೂ ಅಪ್ಪಿಕೊಂಡು "ನಾನೇ ನಿನ್ನ ತಂದೆ! ಆಗಿನ್ನೂ ಯುವಕನಾಗಿದ್ದೆ. ಈಗ ನಾನು ಮುದಿಯ ರಿಪ್ ವಾರ್ ವಿಂಕಲ್! ಈ ಬಡಪ್ರಾಣಿ ರಿಪ್ ವಾರ್ ವಿಂಕಲಿನ ಗುರುತು ಯಾರಿಗೂ ಇಲ್ಲವೆ!"

ಎಲ್ಲರೂ ಆಶ್ಚರ್ಯದಿಂದ ಮೂಕರಾಗಿ ನಿಂತರು. ಕೈಕಾಲು ನಡು

ಗುವ ಮುದುಕಿಯೊಬ್ಬಳು ಗುಂಪಿನಿಂದ ಮುಂದೆ ಬಂದು, ಹುಬ್ಬಿನ ಮೇಲೆ ತನ್ನ ಕೈಯಿನ ನೆರಳು ಮಾಡಿಕೊಂಡು ರಿಪ್ಪನನ್ನು ಒಂದು ಕ್ಷಣ ದಿಟ್ಟಿಸಿದಳು. "ಅನುಮಾನವೇ ಇಲ್ಲ! ಇವನೇ ರಿಪ್ ವ್ಯಾ ವಿಂಕಲ್, ನಮ್ಮ ನೆರೆಯವನು! ಮತ್ತೆ ಸುಖವಾಗಿ ಬಂದೆಯಲ್ಲ! ಏನಪ್ಪ, ಇಪ್ಪತ್ತು ವರ್ಷ ಎಲ್ಲಿಗೆ ಹೋಗಿದ್ದೆ? ಎಲ್ಲಿದ್ದೆ?"

ರಿಪ್ ತನ್ನ ಕಥೆ ಹೇಳಿ ಮುಗಿಸುವುದಕ್ಕೆ ಹೆಚ್ಚು ಹೊತ್ತೇನೂ ಹಿಡಿಯಲಿಲ್ಲ. ಆ ಇಪ್ಪತ್ತು ವರ್ಷವೂ ಅವನ ಭಾಗಕ್ಕೆ ಒಂದೇ ರಾತ್ರಿ ತಾನೆ! ಅದನ್ನು ಕೇಳಿದಾಗ ಊರವರೆಲ್ಲರೂ ಬೆಪ್ಪಾಗಿ ನಿಂತರು; ಕೆಲವರು ತಮ್ಮ ಸ್ನೇಹಿತರಿಗೆ ಕಣ್ಣು ಮಿಟುಕಿಸಿ ನಾಲಗೆಯನ್ನು ಕೆನ್ನೆಗೆ ತಗಲಿಸಿದರು. ಮೂಲೆ ಟೋಪಿಯ ಯಜಮಾನರು—ಹೆದರಿಕೆಗೆ ಕಾರಣ ವೇನೂ ಇಲ್ಲವೆಂದು ನಿಶ್ಚಯವಾದ ಮೇಲೆ—ಮತ್ತೆ ರಂಗಕ್ಕೆ ಇಳಿದು ಬಾಯಿತಿರುವಿ ತಲೆ ಅಲ್ಲಾಡಿಸಿದರು. ಅದನ್ನು ಕಂಡು ಸಭೆಗೆ ಸಭೆಯೇ ತಲೆ ಅಲ್ಲಾಡಿಸಿತು.

ಅಷ್ಟು ಹೊತ್ತಿಗೆ ರಸ್ತೆಯಲ್ಲಿ ತಮ್ಮ ಕಡೆಗೇ ನಿಧಾನವಾಗಿ ಬರುತ್ತಿದ್ದ ವೃದ್ಧ ಪೀಟರ್ ವಾಂಡರ್‌ಡೋಂಕನ ಅಭಿಪ್ರಾಯವನ್ನು ಕೇಳಬೇಕೆಂದು ನಿಶ್ಚಯವಾಯಿತು. ಆತ ಆ ಪ್ರಾಂತದ ಚರಿತ್ರೆ ಬರೆದಿದ್ದ ವಾಂಡರ್‌ಡೋಂಕನ ವಂಶೀಕ; ಊರಿನಲ್ಲಿ ಎಲ್ಲರಿಗಿಂತಲೂ ಹೆಚ್ಚುಕಾಲ ಬದುಕಿದವನಲ್ಲದೆ, ಅಲ್ಲಿಯ ಹಳೆಯ ಕಥೆಗಳು, ವಿಚಿತ್ರವಾದ ಸ್ಥಳಪುರಾಣಗಳು ಎಲ್ಲವನ್ನೂ ಬಲ್ಲವನು. ಅವನು ಬಂದ ಕೂಡಲೆ ರಿಪ್ಪನನ್ನು ಗುರುತಿಸಿ, ಅವನು ಹೇಳಿದ ಕಥೆ ನಿಜವೆಂದು ಎಲ್ಲರಿಗೂ ನಂಬಿಕೆಕೊಟ್ಟನು. ಕಾಟ್‌ಸ್ಕಿಲ್ ಪರ್ವತಗಳಲ್ಲಿ ಯಾವಾಗಲೂ ಅಮಾನುಷ ವ್ಯಕ್ತಿಗಳ ಓಡಾಟವುಂಟೆಂದು ಅವನ ಪೂರ್ವಿಕನಾದ ಚರಿತ್ರಕಾರನ ಕಾಲದಿಂದ ಕಥೆಗಳಿದ್ದುವಂತೆ. ಆ ದೇಶವನ್ನೂ ನದಿಯನ್ನೂ ಮೊದಲು ಕಂಡುಹಿಡಿದ ಹೆಂಡ್ರಿಕ್ ಹಡ್ಸನ್ನನು ತನ್ನ "ಅರ್ಧಚಂದ್ರ" ಎಂಬ ಹಡಗಿನ ನಾವಿಕರೊಡನೆ ಅಲ್ಲಿ ಇಪ್ಪತ್ತು ವರ್ಷಗಳಿಗೊಂದು ಸಾರಿ ರಾತ್ರಿಯೆಲ್ಲಾ ಆಟವಾಡುವುದುಂಟಂತೆ. ತನ್ನ ಸಾಹಸದಿಂದ ಕಂಡುಹಿಡಿದ ದೇಶ, ತನ್ನ ಹೆಸರು ಕೊಟ್ಟಿರುವ ನದಿ ಮತ್ತು

ನಗರ–ಇವುಗಳಿಗೆ ಆಗಾಗ ಭೇಟಿಕೊಟ್ಟು ಕಾವಲು ನೋಡಿಕೊಳ್ಳು ವಂತೆ ಅವನಿಗೆ ಅಪ್ಪಣೆಯಾಗಿತ್ತಂತೆ. ಪರ್ವತದ ಅಂಗಳವೊಂದರಲ್ಲಿ ಅವರು ಡಚ್ಚರ ಉಡುಪನ್ನು ಧರಿಸಿ "ನೈನ್ ಪಿನ್ಸ್" ಆಡುವುದನ್ನು ಪೀಟರನ ಅಪ್ಪನೇ ಒಂದು ಸಾರಿ ನೋಡಿದ್ದನಂತೆ; ಮತ್ತೊಂದು ಬೇಸಗೆಯ ದಿನ ಸಂಜೆಯಲ್ಲಿ ಅವರು ಚೆಂಡನ್ನುರುಳಿಸುವ ಸದ್ದು ದೂರದ ಗುಡುಗಿನಂತೆ ಕೇಳಿಸಿಯೂ ಇತ್ತಂತೆ.

ಇನ್ನು ನಮ್ಮ ಕಥೆಯನ್ನು ಹೆಚ್ಚು ಬೆಳೆಸಬೇಕಾಗಿಲ್ಲ. ಹೋಟಲ ಮುಂದಿನ ಸಭೆ ಚದರಿ ಕಥೆಗಿಂತಲೂ ಮುಖ್ಯವಾದ ಚುನಾವಣೆಯ ವಿಷಯಕ್ಕೆ ಮತ್ತೆ ಮನಸ್ಸುಕೊಟ್ಟಿತು. ರಿಪ್ಪನ ಮಗಳು ಅವನನ್ನು ಮನೆಗೆ ಕರೆದುಕೊಂಡು ಹೋದಳು. ಅವಳ ಗಂಡ ಚೆನ್ನಾಗಿ ಮೈ ತುಂಬಿ ಗೆಲುವಾಗಿದ್ದ ಬೇಸಾಯಗಾರ; ಅಣಿಯಾದ ಮನೆಮಾಡಿ ಕೊಂಡು ತನಗೆ ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಂಡಿದ್ದನು. ರಿಪ್ಪನಿಗೆ ಅವನ ಗುರುತೂ ಆಯಿತು. ಆತ ಹುಡುಗನಾಗಿದ್ದಾಗ ಎಷ್ಟೋ ಸಾರಿ ರಿಪ್ಪನ ಬೆನ್ನ ಮೇಲೆ ಸವಾರಿಮಾಡಿದ್ದನು. ರಿಪ್ಪನ ವಂಶೋ ದ್ಧಾರಕನ ವಿಷಯ ಹೆಚ್ಚು ಹೇಳಬೇಕಾದ್ದಿಲ್ಲ. ಎಷ್ಟಾದರೂ ಅಪ್ಪನ ಮುರುಕು. ಬೇಸಾಯದ ಕೆಲಸವನ್ನು ಅವನಿಗೂ ಸ್ವಲ್ಪ ಹಚ್ಚಿದರು. ಆದರೆ ಅವನು ತಂದೆಯ ಕಾಲದ ಪದ್ಧತಿಯನ್ನು ಬಿಡಲೊಲ್ಲ. ತನ್ನ ಕೆಲಸಬಿಟ್ಟು ಉಳಿದದ್ದೆಲ್ಲಾ ಮಾಡುವುದು, ಮರ ಒರಗಿ ನಿಂತಿರುವುದು– ಇದೇ ಅವನಿಗೂ ಮುಖ್ಯೋದ್ಯೋಗ.

ರಿಪ್ ಎಂದಿನಂತೆ ತಿರುಗಿಕೊಂಡು ತನ್ನ ಹಿಂದಿನ ಜೀವನವನ್ನೇ ಮತ್ತೆ ಅಭ್ಯಾಸಕ್ಕೆ ತಂದುಕೊಂಡನು. ಅವನ ಹಳೆಯ ದೋಸ್ತಿಗಳಲ್ಲಿ ಕೆಲವರು—ಎಲ್ಲಾ ವಯಸ್ಸಾಗಿ ಶಕ್ತಿ ಉಡುಗಿದವರು—ಮತ್ತೆ ಜೊತೆಗೆ ಸಿಕ್ಕಿದರು. ಆದರೆ ರಿಪ್ಪನಿಗೆ ಬೆಳೆಯುವ ಹುಡುಗರ ಜೊತೆಯಲ್ಲೇ ಬಳಕೆ ಹೆಚ್ಚಾಯಿತು. ಅವರಿಗೂ ರಿಪ್ಪನನ್ನು ಕಂಡರೆ ಬಹಳ ಇಷ್ಟ.

ರಿಪ್ಪನಿಗೆ ಮನೆಯಲ್ಲೇನೂ ಕೆಲಸವಿಲ್ಲ; ಅಲ್ಲದೆ ಅವನೀಗ ಸೋಮಾರಿಯಾಗಿದ್ದರೆ ಯಾರೂ ತಪ್ಪೆಣಿಸುವ ಹಾಗಿಲ್ಲ; ವಯಸ್ಸಿನ ಮಹಿಮೆ ಅಂಥಾದ್ದು. ಆದ್ದರಿಂದ ಅವನು ನಿಶ್ಚಿಂತೆಯಾಗಿ ಹೋಟಲ

ಮುಂದಿನ ಬೆಂಚಿನಮೇಲೆ ತನ್ನ ಸ್ಥಾನದಲ್ಲಿ ಹೋಗಿ ಕೂರುವನು. ಊರಿನಲ್ಲಿ ಹಿರಿಯರಾಗಿ ಗಣ್ಯರಾದವರಲ್ಲಿ ಅವನೂ ಒಬ್ಬ; ಯುದ್ಧಕ್ಕಿಂತ ಹಿಂದಿನ ಕಾಲದ ಚರಿತ್ರೆಯೆಲ್ಲಾ ಅವನಲ್ಲಿ ಮೂರ್ತಿವತ್ತಾಗಿತ್ತು. ಮೊದಮೊದಲು ಅವನಿಗೆ ಹರಟೆಯಲ್ಲಿ ಭಾಗವಹಿಸುವುದು ಸ್ವಲ್ಪ ಕಷ್ಟ ವಾಯಿತು. ಅವನು ಇಪ್ಪತ್ತು ವರ್ಷದ ನಿದ್ದೆಗೆ ಮಲಗಿದ ಮೇಲೆ ನಡೆ ದಿದ್ದ ವಿಶೇಷ ಸಂಗತಿಗಳು—ಅಮೇರಿಕದಲ್ಲಿ ಕ್ರಾಂತಿಯಾಗಿ ಯುದ್ಧ ಸಂಭವಿಸಿದ್ದು, ದೇಶದ ಮೇಲೆ ಇಂಗ್ಲೆಂಡಿನವರು ಹೇರಿದ್ದ ಗುಲಾಮ ಗಿರಿಯನ್ನು ತಳ್ಳಿಹಾಕಿದ್ದು, ತಾನು ಈಗ ಮೂರನೆಯ ಜಾರ್ಜನ ಪ್ರಜೆ ಯಾಗಿರದೆ ಸಂಯುಕ್ತ ಸಂಸ್ಥಾನದ ಸ್ವತಂತ್ರ ಪ್ರಜೆಯಾಗಿರುವುದು— ಇವೆಲ್ಲಾ ತಲೆಗೆ ಹತ್ತಬೇಕಾದರೆ ಸ್ವಲ್ಪ ಕಾಲ ಹಿಡಿಯಿತು. ರಿಪ್ ರಾಜ ಕಾರಣಿಯಲ್ಲ; ದೇಶಗಳಲ್ಲೂ ಚಕ್ರಾಧಿಪತ್ಯಗಳಲ್ಲೂ ಏನೇ ಬದಲಾವಣೆ ಯಾಗಲಿ ಅವನ ಮೇಲೆ ಅದರ ಪರಿಣಾಮವೇನೂ ಇಲ್ಲ. ಒಂದು ತರಹ ದಬ್ಬಾಳಿಕೆಗೆ ಸಿಕ್ಕಿ ಅವನು ಜೀವಮಾನವೆಲ್ಲಾ ನರಳಿದ್ದನು. ಅದು— ಹೆಂಡತಿಯ ದಬ್ಬಾಳಿಕೆ—ಈಗ ಅದೃಷ್ಟವಶಾತ್ ತಪ್ಪಿತು. ದಾಂಪತ್ಯದ ನೊಗ ಕತ್ತಿನಿಂದ ಕಳಚಿಬಿತ್ತು. ಈಗ ಮನೆಯಿಂದ ಯಾವಾಗ ಬೇಕಾ ದರೂ ಹೋಗಬಹುದು, ಎಲ್ಲಿ ಬೇಕಾದರೂ ತಿರುಗಬಹುದು, ಹೆಂಡತಿಯ ನಾಲಗೆಯ ಭಯವಿಲ್ಲದೆ. ಯಾರಾದರೂ ಅವಳ ಮಾತೆತ್ತಿದರೆ ರಿಪ್ ತಲೆ ಅಲ್ಲಾಡಿಸಿ ಆಕಾಶದ ಕಡೆ ನೋಡುವನು. ಅದರ ಅರ್ಥ "ದೇವರು ಮಾಡಿಸಿದ ಹಾಗಾಗಲಿ" ಎಂಬ ವೈರಾಗ್ಯವಿರಬಹುದು; ಅಥವಾ "ಅವಳ ಕೈತಪ್ಪಿಸಿಕೊಂಡು ಬದುಕಿದೆ" ಎಂಬ ಸಂತೋಷವಿದ್ದರೂ ಇರಬಹುದು.

ಯೂನಿಯನ್ ಹೋಟೆಲಿಗೆ ಬಂದ ಅತಿಥಿಗಳೆಲ್ಲರಿಗೂ ರಿಪ್ ತನ್ನ ಕಥೆಯನ್ನು ಹೇಳುವನು. ಮೊದಮೊದಲು ಒಂದು ಸಾರಿ ಹೇಳಿದ್ದಕ್ಕೂ ಎರಡನೆಯ ಸಾರಿ ಹೇಳಿದ್ದಕ್ಕೂ ಸ್ವಲ್ಪ ವ್ಯತ್ಯಾಸ ಕಾಣುತ್ತಿತ್ತು. ಇಪ್ಪತ್ತು ವರ್ಷ ನಿದ್ದೆ ಮಾಡಿ ಆಗ ತಾನೆ ಎದ್ದವನು ಸ್ವಲ್ಪ ತಪ್ಪು ವುದು ಸಹಜವೆನ್ನಬಹುದು. ಸ್ವಲ್ಪ ಕಾಲ ಕಳೆದ ಮೇಲೆ ಕಥೆ ನಾನು ಮೇಲೆ ಹೇಳಿರುವ ರೂಪವನ್ನು ತಾಳಿ ಸ್ಥಿರವಾಗಿ ನಿಂತಿತು. ಹಳ್ಳಿಯ ಸುತ್ತ ಮುತ್ತ ಗಂಡಸರು, ಹೆಂಗಸರು, ಮಕ್ಕಳು—ಎಲ್ಲರಿಗೂ ಕಥೆ

ಬಾಯಿ ಪಾಠವಾಗಿ ಹೋಗಿತ್ತು. ಕೆಲವರು “ಅದನ್ನು ನಂಬಲಾಗದು, ರಿಪ್ಪನಿಗೆ ಬುದ್ಧಿ ನೆಟ್ಟಗಿರಲಿಲ್ಲ. ಈ ವಿಷಯದಲ್ಲಿ ಮಾತ್ರ ಅವನ ಬುದ್ಧಿ ಈಗಲೂ ನೆಚ್ಚುವ ಹಾಗಿಲ್ಲ” ಎಂದು ಅಪನಂಬಿಕೆ ನಟಿಸುವರು. ಹಿಂದಿನ ಡಚ್ ಜನರೆಲ್ಲ ಕಥೆಯನ್ನು ಪೂರ್ಣವಾಗಿ ನಂಬಿದ್ದರು. ಬೇಸಗೆಯ ದಿನ ಸಂಜೆ ಕಾಟ್‌ಸ್ಕಿಲ್ ಪರ್ವತದ ಬಳಿ ಗುಡುಗಿನ ಸದ್ದು ಕೇಳಿದಾಗಲೆಲ್ಲ “ಹೆಂಡ್ರಿಕ್ ಹಡ್ಸನ್ನನೂ ಅವನ ನಾವಿಕರೂ ‘ನೈನ್‌ಪಿನ್ಸ್’ ಆಡುತ್ತಿದ್ದಾರೆ” ಎಂದುಕೊಳ್ಳುವರು.

ಹಳ್ಳಿಯಲ್ಲಿ ಹೆಂಡತಿಯ ಅಂಕೆಗೆ ಸಿಕ್ಕಿ ಸಂಸಾರದ ಭಾರವನ್ನು ಹೊರಲಾರದವರೆಲ್ಲಾ “ರಿಪ್ ವಾನ್ ವಿಂಕಲಿನ ಮದ್ಯಪಾತ್ರೆಯ ಗುಟುಕು ನಮಗೂ ಸ್ವಲ್ಪ ಸಿಕ್ಕಬಾರದೆ!” ಎಂದು ಆಸೆಯಿಂದ ಹಾತೊರೆಯುವರು.

---

# ವಿಶ್ವಸಾಹಿತ್ಯ ಮಾಲೆ

---

ಕ್ರೌನ್ ಅ. ೯೬ ಪುಟಗಳು. ಬೆಲೆ ಹನ್ನೆರಡು ಆಣೆಗಳು.

ಮುಂಗಡವಾಗಿ ಮೂರು ರೂಪಾಯಿಗಳ ಚಂದಾಹಣವನ್ನು ಕಳುಹಿಸಿದರೆ ನಾಲ್ಕು ಪುಸ್ತಕಗಳನ್ನು ಅಂಚೆವೆಚ್ಚವಿಲ್ಲದೆ ತಲಪಿಸಲಾಗುವುದು.

## ಉದ್ದೇಶ

ಪ್ರಪಂಚದ ಎಲ್ಲ ಜನಾಂಗಗಳ ಕಥೆಗಳನ್ನೂ, ನಾಟಕಗಳನ್ನೂ ವಿಚಾರಸಾಹಿತ್ಯವನ್ನೂ, ಧರ್ಮಸಾಹಿತ್ಯವನ್ನೂ ಕನ್ನಡ ಭಾಷಾಂತರದ ಮೂಲಕ ಜನರಿಗೆ ಪರಿಚಯ ಮಾಡಿಕೊಡುವುದು ಈ ಮಾಲೆಯ ಉದ್ದೇಶ. ಈ ಮಾಲೆಯ ಪುಸ್ತಕಗಳನ್ನು ಆಯಾ ವಿಚಾರದಲ್ಲಿ ಚೆನ್ನಾಗಿ ಪರಿಶ್ರಮ ಪಡೆದಿರುವ, ಪಳಗಿದ ಕನ್ನಡ ಲೇಖಕರಿಂದ ಬರೆಸಲಾಗುವುದು.

## ಸಿದ್ಧವಾಗಿರುವ ಪುಸ್ತಕಗಳು

ಕಥೆಗಳು—

| | |
|---|---|
| ಯೋಧನ ಪುನರಾಗಮನ— | ಶ್ರೀ. ಎ. ಎನ್. ಮೂರ್ತಿರಾವ್ |
| ಸುವರ್ಣಕೀಟ— | ,, ಎಂ. ಗೋಪಾಲಕೃಷ್ಣ ಅಡಿಗ |

## ಅಚ್ಚಿನಲ್ಲಿರುವ ಪುಸ್ತಕಗಳು

| | |
|---|---|
| ರೈತರ ಹುಡುಗಿ— | ಶ್ರೀ. ಎಂ. ಗೋಪಾಲಕೃಷ್ಣ ಅಡಿಗ |
| ಅರೇಬಿಯುಡ ರಾತ್ರಿಯ ಕಥೆಗಳು— ಆರು ಸಂಪುಟಗಳಲ್ಲಿ | ,, ಜಿ. ಹನುಮಂತರಾವ್ |
| ಕಥಾಸರಿತ್ ಸಾಗರ— ಎಂಟು ಸಂಪುಟಗಳಲ್ಲಿ | ,, ಎ. ಎನ್. ಮೂರ್ತಿರಾವ್ ಮತ್ತು ಜಿ. ಹನುಮಂತರಾವ್ |
| ವೇದಗಳು— | ,, ಜಿ. ಹನುಮಂತರಾವ್ |
| ಉಪನಿಷತ್ತುಗಳು— | ,, |

ವಿವರಗಳಿಗೆ :

ವಿಶ್ವಸಾಹಿತ್ಯ, ಪ್ರಕಾಶಕರು,

೧೨೧೦ ಕಾಂತರಾಜಾ ರಸ್ತೆ, ಮೈಸೂರು